

ದೇವ ಬಂದ ನಮ್ಮ ಸ್ವಾಮಿ ಬಂದನೋ
ದೇವ ದೇವ ಶಿಖಾಮಣಿ ಬಂದನೋ ॥ ಪ ॥

ಉರಗಶಯನ ಬಂದ ಗರುಡಗಮನ ಬಂದ
ನರಗೊಲಿದವ ಬಂದ ನಾರಾಯಣ ಬಂದನೋ ॥ 1 ॥

ಮಂದರೋದ್ಧಾರ ಬಂದ ಮಾಮನೋಹರ ಬಂದ
ವೃಂದಾವನ ಪತಿ ಬಂದ ಗೋವಿಂದ ಬಂದನೋ ॥ 2 ॥

ನಕ್ರಹರನು ಬಂದ ಚಕ್ರಧರನು ಬಂದ
ಅಕ್ರೂರಗೊಲಿದ ಬಂದ ತ್ರಿವಿಕ್ರಮ ಬಂದನೋ ॥ 3 ॥

ಪಕ್ಷಿವಾಹನ ಬಂದ ಲಕ್ಷ್ಮಣಾಗ್ರಜ ಬಂದ
ಅಕ್ಷಯ ಫಲದ ಶ್ರೀ ಲಕ್ಷ್ಮೀರಮಣ ಬಂದನೋ ॥ 4 ॥

ನಿಗಮಗೋಚರ ಬಂದ ನಿತ್ಯತೃಪ್ತನು ಬಂದ
ನಗೆಮುಖದ ಪುರಂದರ ವಿಠಲ ಬಂದನೋ ॥ 5 ॥

—ಶ್ರೀ ಪುರಂದರದಾಸರು

# ಓದುಗರ ಓಲೆ

ಮಾನ್ಯರೆ ;

ಜೂನ್ ತಿಂಗಳಲ್ಲಿ ಪ್ರಕಟವಾದ ಶ್ರೀಮತೀ ಸ್ವಯಂವರ ಕಥೆ ಚೆನ್ನಾಗಿ ಮೂಡಿ ಬಂದಿದೆ. ಅದನ್ನು ಬರೆದವರಿಗೂ ನಿಮಗೂ ಧನ್ಯವಾದಗಳು.

ಎಸ್. ಸಂಜೀವಕುಮಾರ
ಎಸ್. ಕೆ. ಭೀಮಸೇನರಾವ್
ಗಂಗಾವತಿ.

ಮಾನ್ಯರೆ ;

ಜೂನ್ 1985 ರಲ್ಲಿನ ಸಪ್ತಗಿರಿಯಲ್ಲಿ ಪ್ರಕಟವಾದ 'ಅಯೋಧ್ಯೆ' ಯಲ್ಲಿನ ವಾಲ್ಮೀಕಿ ಭವನ, ಸೀತಾರಸೋಯಿ, ರತ್ನ ಸಿಂಹಾಸನ ಮಂದಿರ, ಅಯೋಧ್ಯಾನಗರ–ಮೊದಲಾದ ಚಿತ್ರಗಳೂ, ಸಂಬಂಧಪಟ್ಟ ವೃತ್ತಾಂತಗಳನ್ನೂ ಓದುತ್ತಿದ್ದಾಗ ಅಯೋಧ್ಯೆಯನ್ನೇ ಪ್ರತ್ಯಕ್ಷ ನೋಡಿದಂತೆ ಆದರೂ, ಶ್ರೀರಾಮಚಂದ್ರನು ಸರಳುಗಳ ಹಿಂದೆ ಸರ್ಕಾರೀ ಸ್ವಾಧೀನದಲ್ಲಿರುವ ಬಗ್ಗೆ ಓದಿ ಖೇದವೆನಿಸಿತು. ಈ ಪರಿಸ್ಥಿತಿ ಬದಲಾಗಿ ಸರ್ವರೂ ಸ್ವಾಮಿಯನ್ನು ನೋಡುವ ದಿನ ಬೇಗ ಬರಲಿ ಎಂದು ಪ್ರಾರ್ಥಿಸುವೆ.

ಯಮುನಪ್ಪ,
ರಾಯಚೂರು.

ಮಾನ್ಯರೆ ;

ಜೂನ್ ತಿಂಗಳ ಸಪ್ತಗಿರಿಯಲ್ಲಿ ಮೂಡಿಬಂದ ಶ್ರೀಮತಿ ಸ್ವಯಂವರ ಅತಿಚೆನ್ನಾಗಿದೆ. ಮುಖಪುಟ ಮಾತ್ರ ಶಾಯಿ ಹೆಚ್ಚಾದಂತಿದೆ.

ನಾರಾಯಣ ಅಡವಿರಾವ್,
ರಾಯಚೂರು.

ಮಾನ್ಯಸಂಪಾದಕರೆ ;

ಸಪ್ತಗಿರಿಯ ಫೆಬ್ರುವರಿ 1985 ರ ಸಂಚಿಕೆಯಲ್ಲಿನ ಗೀತಾ ಮಹಾತ್ಮ್ಯೆಯೊಡನೆ ಮುಕ್ತಾಯವಾಗಿರುವ ಸರಳ ಕನ್ನಡ ತಾತ್ಪರ್ಯ ಸಹಿತವಾದ ಶ್ರೀಮದ್ಭಗವದ್ಗೀತೆ ಬಹಳ ಸೊಗಸಾಗಿದೆ. ಇದನ್ನು ಪುಸ್ತಕರೂಪದಲ್ಲಿ ಪ್ರಕಟಿಸಿದರೆ ಅನೇಕರಿಗೆ ಉಪಯುಕ್ತವಾಗುವುದು.

ಬಿ. ಎಸ್. ನಾರಾಯಣಮೂರ್ತಿ,
ಬೆಂಗಳೂರು.

("ಶ್ರೀಮದ್ಭಗವದ್ಗೀತಾ" ಪುಸ್ತಕ ಈಗಾಗಲೇ ಪುಸ್ತಕರೂಪದಲ್ಲಿ ಪ್ರಕಟವಾಗಿದೆ, ತಿ. ತಿ. ದೇ. ಪ್ರಕಟನ ವಿಭಾಗದಿಂದ. ಎರಡು ರೂ. ಬೆಲೆಯ ಈ ಪುಸ್ತಕವನ್ನು ವೆಲ್‌ಫೇರ್ ಆಫೀಸರ್ ತಿ. ತಿ. ದೇ. ಅವರಿಗೆ ಪ್ರತ್ಯೇಕ ಅಂಚೆ ವೆಚ್ಚದೊಡನೆ ಬರೆಯುವುದರಿಂದ ಪಡೆಯಬಹುದು.)



ಸಂಪುಟ ೧೬] ಆಗಸ್ಟ್ ೧೯೮೫ [ಸಂಚಿಕೆ ೩

# ವಿಷಯಸೂಚಿ


| | | |
|---|---|---|
| ವೇದವಾಙ್ಮಯ ಪರಿಚಯ | ಡಾ॥ ಎಸ್. ಅನಂತರಂಗಾಚಾರ್ | ... 5 |
| ಪ್ರಭಾವೀ ಕರ್ನಾಟಕ | ಆದ್ಯ ರಾಮಾಚಾರ್ಯ | ... 9 |
| ಮಣ್ಣಿನಲ್ಲಿ ಮುಕುಂದ | ಬ.ನ. ಗುಂಡೂರಾವ್ | ... 13 |
| ಶ್ರೀ ವ್ಯಾಸತತ್ತ್ವಜ್ಞರು | ಸತ್ಯನಾರಾಯಣಾಚಾರ್ಯ | ... 15 |
| ಶಬ್ದಪ್ರಮಾಣ | ಡಿ. ಕೃಷ್ಣಯ್ಯಂಗಾರ್ | ... 17 |
| ಶ್ರೀ ವೆಂಕಟೇಶ್ವರಸ್ವಾಮಿ ಪವಿತ್ರೋತ್ಸವ | ಎಂ ವಿ. ಸುಬ್ಬರಾವ್ | ... 21 |
| ಹರಿದಾಸರು ಕಂಡ ರಾಘವೇಂದ್ರರು | ಕೆ. ಅಪ್ಪಣಾಚಾರ್ಯ | ... 23 |
| ಸಂಸ್ಕೃತಿ ಹಾಗೂ ಸ್ತ್ರೀ | ಸುಮನ ಬದರೀನಾಥ್ | ... 25 |
| ಪೂವಲ್ಲಿ ಕ್ಷೇತ್ರ | ಬಿ ಷಣ್ಮುಖಾಚಾರ್ಯ | ... 32 |
| **ಕಿಶೋರಜಗತ್** | | |
| ನಾಮದೇವ | ಪಿ.ಎಸ್. ಮಂಜುನಾಥ | ... 22 |
| **ಗೃಹಲಕ್ಷ್ಮಿ** | | |
| ಮಹಾಲಕ್ಷ್ಮಿ | ರಘುಸುತ | .... 29 |
| **ಯುವವಾಣಿ** | | |
| ಕಾಯಕದ ಹಿರಿಮೆ | ಪುತ್ತೂರು ವ್ಯಾಸಕೃಷ್ಣ ತಂತ್ರಿ | ... 35 |
| ವಾರ್ತಾಲಹರಿ | | ... 37 |


ಮುಖ ಚಿತ್ರ : ಮೀರಾಬಾಯಿ ಚಿತ್ರ : ಶ್ರೀ ಬಾಬುನಾಥ್

ಹಿಂಬದಿಯಲ್ಲಿ : ಶ್ರೀ ವೈಖಾನಸಾಚಾರ್ಯರು

ಒಳಗಡೆಯಲ್ಲಿ : ಶ್ರೀ ವೆಂಕಟೇಶ್ವರಸ್ವಾಮಿ ಪವಿತ್ರೋತ್ಸವ ಹಾಗೂ ಬ್ರಹ್ಮೋತ್ಸವ ಚಿತ್ರಗಳು.


ಗೌರವ ಸಂಪಾದಕರು :
ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬರಾವು, ಎಂ.ಎ.,

ಉಪಸಂಪಾದಕ :
ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**




ಅಜಾಯಮಾನೋಽಪಿ ಬಹುಧಾ ವಿಜಾಯತೇ– ಎಂದು ಪುರುಷಸೂಕ್ತ ಭಗವಂತನನ್ನು ವರ್ಣಿಸುತ್ತಿದೆ. ಇದನ್ನೇ ವೇದವಿದರು 'ಏಕಂ ಸತ್ ವಿಪ್ರಾ ಬಹುಧಾ ವದಂತಿ' ಎಂದರು. ಎಂದರೆ ಸೃಷ್ಟಿ ಸ್ಥಿತಿ ಲಯಾದಿಗಳಿಲ್ಲದ ಸಗುಣ ಸಾಕಾರ ಬ್ರಹ್ಮನಿಂದ ಅನೇಕ ಅಂಶಗಳು ಅವಸ್ಥಾಭೇದವನ್ನನುಸರಿಸಿ ವಿವಿಧ ಆಕೃತಿಗಳನ್ನು ಧರಿಸಿ ಏರ್ಪಡುತ್ತವೆ ಎಂಬುದು. ಉಪಾಧಿ ಭೇದದಲ್ಲಿರುವ ಜೀವರುಗಳು ಪರಸ್ಪರ ಸನ್ನಿಕರ್ಷಣದಿಂದ ಪರಸ್ಪರ ಸಂಲೀನವಾಗಲು ಹಾತೊರೆಯುವಂತೆಯೇ ಬೃಹದಾತ್ಮದಿಂದ ಅನಂತ ವಿಶ್ವಕ್ಕೆ ಆಗಮಿಸಿದ ದೇಹಿಗಳು ಉಪಾಧಿ ವ್ಯವಸ್ಥೆಗೆ ಅತೀತನಾದ ಆ ಪರಮಾತ್ಮನಲ್ಲಿ ಲೀನವಾಗಬೇಕೆಂದು ತಹತಹಪಡುತ್ತವೆ. ಈ ಆತ್ಮ ಪರಮಾತ್ಮ ಸಂಲೀನ ವಿಧಾನವನ್ನೇ ಲೌಕಿಕ ಶೃಂಗಾರೋದಾಹರಣೆಯಿಂದ ರಸಜ್ಞರು ವಿವರಿಸಿದರು.

ಲೌಕಿಕ ಪಾರಲೌಕಿಕ ಪರಮಾವಧಿ ಆ ಬೃಹದಾತ್ಮನೇ ಆದಾಗ ಅದರ ಸಂಸರ್ಗವಿಲ್ಲದ ಜೀವಗಳೆಲ್ಲ ಸ್ತ್ರೀ ಸದೃಶವೇ ಆಗುತ್ತವೆ. ಎಂತಲೇ ಉಪಾಧಿಸ್ಥ ಆತ್ಮಗಳೆಲ್ಲ ಪಶುಗಳೆಂದೂ ಶಿವನು ಪಶುಪತಿಯೆಂದೂ ಶಿವಪರವಾಗಿ ಅನ್ವಯಿಸಿ ಶೈವ ವಿವರಿಸಿದರೆ, ಜೀವಿಗಳೆಲ್ಲ ಗೋವುಗಳೆಂದೂ ಅವುಗಳ ರಕ್ಷಕನಾಗಿ ಆಕರ್ಷಿಸುವವ ಗೋಪಾಲನೆಂದೂ ವಿಷ್ಣುಪರವಾಗಿ ವೈಷ್ಣವ ವಿವರಿಸುತ್ತದೆ. ಇನ್ನೂ ಮುಂದುವರಿದು ಶರಣಸತಿ ಲಿಂಗಪತಿ ಎಂದು ಶೈವವೂ ಜೀವಸತಿದೇವಪತಿ ಎಂದು ವೈಷ್ಣವವೂ ವರ್ಣಿಸಿದ್ದುಂಟು ಈ ಪರಿಕಲ್ಪನೆಯನ್ನು. ಇಂತಹ ಗಭೀರವಾದ ಶಾಸ್ತ್ರಜ್ಞಾನ ತಮ್ಮದೇ ಆಸ್ತಿಯೆಂಬಂತೆ ಅಹಂಕರಿಸಿದವರಿಗೆ 'ವಿಶ್ವದಲ್ಲಿ ಗೋವಿಂದನ ಹೊರತು ಬೇರಾರು ಪುರುಷರಿದ್ದಾರೆ, ಎಲ್ಲರೂ ಸ್ತ್ರೀಯರೇ' ಎಂದು ನೇರವಾಗಿ ಹೇಳಿದವಳು ಮೀರಾ. ನಮಗೆ ಅರ್ಥವಾಗಬೇಕಾದದ್ದೂ ಅದೇ. ಅಲ್ಲಿಯವರೆಗೆ ಈ ಅಹಂಕಾರದ ಕೆಸರು.

ನವವಿಧ ಭಕ್ತಿಮಾರ್ಗದಲ್ಲಿ ಒಂದಾದ ಸಂಕೀರ್ತನ ಮಾರ್ಗವನ್ನು ಅನುಸರಿಸಿ, ತನ್ನ ಜೀವನವನ್ನು ಗಿರಿಧರಿನಿಗೆ ಅಂಕಿತಮಾಡಿ, ಆತನೇ ಪ್ರಭುವೆಂದೂ, ಪ್ರಿಯನೆಂದೂ ಕೀರ್ತನೆಗಳಲ್ಲಿ ಹಾಡಿ ತೃಪ್ತಿ ಹೊಂದಿದವಳು ಮೀರಾ. ಆಕೆಗೆ ಅಂತಃಪುರವೂ ಬೃಂದಾವನವೂ ಒಂದೆ. ಅಡ್ಡಗೋಡೆಗಳ ರಾಜಗಾರವಗಳನ್ನೆಲ್ಲ ಹಿನ್ನೂಕಿ ಅನನ್ಯಸಾಮಾನ್ಯ ಪಾರಮಾರ್ಥಿಕ ಪರಮಪದವನ್ನೈದಿದ ಪುಣ್ಯಶ್ಲೋಕಳು ಆಕೆ. ತಾನು ಕಂಡ ಸತ್ಯವನ್ನು ಇತರರಿಗೂ ತಿಳಿಸಲು ಆಕೆ ಹಾಡಿದಳು, 'ಮೇರೆ ತೊ ಗಿರಿಧರ ಗೋಪಾಲ ದೂಸರೋ ನ ಕೋಯೀ'. ಹೀಗೆ ಗಿರಿಧರನ ಪ್ರೇಮ ದಿವಾನಿ ಆದ ಮೀರಾಬಾಯಿಗೆ ಸಮಾನರು ಹೆಚ್ಚಿಗೆ ಕಂಡು ಬರುವುದಿಲ್ಲ. (ಒಬ್ಬ ಆಂಡಾಳ್ ಒಬ್ಬ ಅಕ್ಕಮಹಾದೇವಿ ಮೊದಲಾದವರ ಹೊರತು) ಇತರ ಭಕ್ತರೂ ದೇಶ ಕಾಲಾಂತರಗಳಲ್ಲಿ ತಮ್ಮ ಆರಾಧ್ಯದೈವವನ್ನು ಕುರಿತು ಇದೇ ರೀತಿಯ ಅಲೌಕಿಕ ವಿರಹವನ್ನು ವ್ಯಕ್ತಪಡಿಸಿರಬಹುದಾದರೂ ಅವರದೆಲ್ಲ ಸ್ವಾರೋಪಿತ ವಿರಹ. ಇವಳದು ಸಹಜ ಭಾವ. ಅಕ್ಕ ಹೇಳಿದಂತೆ 'ನೊಂದ ನೋವ ನೋಯದವರೆತ್ತ ಬಲ್ಲರು.' ಹೀಗೆ ಮೀರಾಳ ಅನುಭಾವದ ಪರಿ ಬೇರೆ; ಅದರ ಪರಿಣಾಮವೂ ಬೇರೆ. ಎಂತಲೇ ಆಕೆಯ ಮಾರ್ಗ ಆದರಣೀಯ ವಂದನೀಯ.

ಶ್ರೀ ಗಿರಿಧರ್ ಆಗೆ ನಾಚೂಂಗಿ
ನಾಚ್ ನಾಚ್ ಪಿವ ರಸಿಕ್ ರಿಝೂವ್ಞಾ, ಪ್ರೇಮೀ ಜನ್‌ಕೊ ಜಾಚೂಂಗೀ।
ಪ್ರೇಮ್, ಪ್ರೀತಿ ಕೆ ಬಾಂಧ್ ಘುಂಘರೂ, ಸುರತ್ ಕಿ ಕಛನೀ ಕಾಛೂಂಗೀ॥
ಲೋಕ್ ಲಾಜ್ ಕುಲ್ ಕಿ ಮರ್ಜಾದಾ, ಯಾ ಮೆ ಏಕ್ ನ ರಾಖೂಂಗೀ।
ಪಿಯಾ ಕೆ ಪಲಂಗಾ ಜಾ ಪೌಡೂಂಗೀ, ಮೀರಾ ಹರಿ ರಂಗ್ ರಾಚೂಂಗೀ॥

# ವೇದವಾಙ್ಮಯ ಪರಿಚಯ

ಭಾರತೀಯ ಸಾಹಿತ್ಯರಾಶಿಯಲ್ಲಿ ಸಂಸ್ಕೃತ ಸಾಹಿತ್ಯವೇ ಪರಮ ಪ್ರಾಚೀನವಾದುದು. ಇದರ ಅವಿಭಾಗವೇ ವೈದಿಕ ವಾಙ್ಮಯ. ಇದರ ಭಾಷೆಯೂ ಸಂಸ್ಕೃತವೇ ಆಗಿದ್ದರೂ ಇದರ ರಚನೆ ಉಚ್ಚಾರಣೆ ವ್ಯಾಕರಣಪ್ರಯೋಗಗಳಲ್ಲಿ ಮುಂದಿನ ಕಾವ್ಯ ತೀರ ವ್ಯತ್ಯಾಸವಾಗಿರುವುದರಿಂದ ಸ್ಪಷ್ಟ ನಿರ್ದೇಶನಕ್ಕಾಗಿ ವೇದಗಳ ಭಾಷೆಯನ್ನು ವೈದಿಕ ಸಂಸ್ಕೃತವೆಂದೂ, ಪಾಣಿನಿಯಿಂದೀಚಿನ ಭಾಷೆಯನ್ನು ಕಾವ್ಯಸ್ಥ ಅಥವಾ ಲೌಕಿಕ ಸಂಸ್ಕೃತವೆಂದೂ ಕರೆದಿದ್ದಾರೆ. ವೈದಿಕಸಂಸ್ಕೃತವೇ ಜೀವಂತವಾಗಿ ಬೆಳೆದು ಮುಂದೆ ಕಾವ್ಯ ಸಂಸ್ಕೃತವಾಗಿ ಪರಿಣಮಿಸಿದೆ.

ಭಾರತೀಯ ಸಾಹಿತ್ಯ ಸೌಧದ ಅಡಿಗಲ್ಲು ವೈದಿಕಸಾಹಿತ್ಯ. ಭಾರತೀಯ ಸಾಹಿತ್ಯಚರಿತ್ರೆಯು ಪ್ರಾರಂಭವಾಗುವುದು ವೈದಿಕವಾಙ್ಮಯದಿಂದಲೇ. ಮುಂದೆ ಹುಟ್ಟಿದ ಎಲ್ಲಧಾರ್ಮಿಕ ಮತ್ತು ಲೌಕಿಕ ಸಾಹಿತ್ಯವೂ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ವೇದ ಸಾಹಿತ್ಯರಾಶಿಗೆ ಸಂಬಂಧಪಟ್ಟಿದೆ. ಈ ವೇದರಾಶಿಯನ್ನು ಸರಿಯಾದ ರೀತಿಯಲ್ಲಿ ಅಭ್ಯಾಸಮಾಡಿದರೆ ಅದರಿಂದ ಲಭಿಸುವ ಫಲವು ಅನಂತವೂ ಬಹುಮುಖವೂ ಆಗಿರುತ್ತದೆ. ವೇದಗಳು ಪ್ರಥಮತಃ ಕಾವ್ಯಗಳು. ಅತ್ಯುಚ್ಚವಾದ ಕಾವ್ಯಗುಣಗಳು ಸರ್ವತ್ರ ಅಲ್ಲಿ ಕಾಣದಿದ್ದರೂ ಅಲ್ಲಿಯ ದೇವತೆಗಳಾದ ಉಷಸ್, ವೃಷ, ಅಗ್ನಿ–ಮೊದಲಾದವರಿಗೆ ಸಂಬೋಧಿಸಿದ ಅನೇಕ ಸೂತ್ರಗಳು ಎಲ್ಲರ ಹೃದಯವನ್ನೂ ಮುಗ್ಧಗೊಳಿಸುವಂತಹವು- ದಾರ್ಶನಿಕ ದೃಷ್ಟಿಯಿಂದಲೂ ಅವುಗಳಿಗೆ ಯೋಗ್ಯಸ್ಥಾನ ಸಲ್ಲುತ್ತದೆ. ನಿಷ್ಕೃಷ್ಟವಾದ ಯಾವ ಒಂದು ಪಕ್ಷ ಅಥವಾ ಸಿದ್ಧಾಂತದ ಉಗಮವನ್ನಾಗಲೀ ಬೆಳವಣಿಗೆಯನ್ನಾಗಲಿ ಅಲ್ಲಿ ಕಾಣಲಾಗದಿದ್ದರೂ, ಅನೇಕ ಜೀವನಸಮಸ್ಯೆಗಳಿಗೆ ಅಲ್ಲಿ ನೇರವಾದ ಪರಿಹಾರವನ್ನು ಕಾಣಬಹುದು. ವೈದಿಕ ಋಷಿಗಳು ತಮ್ಮ ಋಜುವೂ ಸರಳವೂ ಆದ ರೀತಿಯಲ್ಲಿ ದೇವತೆಗಳನ್ನು ಕುರಿತು ಯಜ್ಞರೂಪದಲ್ಲಿ ಮಾಡಿದ ಸ್ತೋತ್ರಗಳು ಅವು. ಅದಕ್ಕೆ ಪ್ರತಿಯಾಗಿ ತಮಗೂ ತಮ್ಮ ಗೋವುಗಳಿಗೂ ದೀರ್ಘಾಯುಸ್ಸನ್ನೂ, ತಮಗೆ ಐಶ್ವರ್ಯವನ್ನೂ ಸಂತಾನಸಂವೃದ್ಧಿಯನ್ನೂ ರೋಗ ಪರಿಹಾರವನ್ನು ಅನುಗ್ರಹಿಸುವಂತೆ ಪ್ರಾರ್ಥಿಸುತ್ತಿದ್ದರು. ಜೀವನ ಸಮಸ್ಯೆಗಳನ್ನ ವಿಚಾರ ಮಾಡುವ ಋಕ್ಕುಗಳೂ ಅಲ್ಲಿ ಇವೆ.

ವೇದಗಳು ಆ ಕಾಲದ ಆರ್ಯರ ಇತಿಹಾಸ ತಿಳಿಸುತ್ತವೆ. ಆರ್ಯರ ಪೂರ್ವೇತಿಹಾಸಗಳನ್ನು ತಿಳಿಸುವ ಆದಿಗ್ರಂಥಗಳು ವೇದಗಳು. ಅಷ್ಟು ಪ್ರಾಚೀನವಾದ ಸಾಹಿತ್ಯರಾಶಿ ಪ್ರಪಂಚದಲ್ಲಿ ಇನ್ನೆಲ್ಲಿಯೂ ಇಲ್ಲ. ಆದರೂ ಒಂದು ಮಾತ್ರೆಯೂ ವ್ಯತ್ಯಾಸವಾಗದೆ ಮೂಲರೂಪದಲ್ಲಿಯೇ ಮುಖವಿದ್ಯೆಯಾಗಿ ಇಲ್ಲಿಯವರೆಗೂ ಬೆಳೆದುಕೊಂಡು ಬಂದಿರುವುದು ಅದರ ವೈಶಿಷ್ಟ್ಯ. ಅದರಿಂದ ಅವು ಅದರ ದ್ರಷ್ಟಾರರ ಪ್ರತ್ಯಕ್ಷ ಪರಿಚಯವನ್ನು ಮಾಡಿಸುತ್ತವೆ. ಅವರ ನಡೆ, ನುಡಿ, ಆಚಾರ, ವ್ಯವಹಾರ, ಧರ್ಮದರ್ಶನ, ದೇವತೆ–ಮೊದಲಾದವು ಅಲ್ಲಿ ಸ್ಪಷ್ಟವಾಗಿ ಗೋಚರವಾಗುವುವು.

ಆಧುನಿಕ ಚರಿತ್ರೆಯನ್ನು ಅಭ್ಯಾಸ ಮಾಡುವವರಿಗೂ ಇದರಿಂದ ವಿಶೇಷಪ್ರಯೋಜನವುಂಟು. ಭಾರತೀಯರ ಮನಸ್ಸು ಅಂದಿನಿಂದ ಇಂದಿನವರೆಗೆ ಒಂದೇ ರೀತಿಯಲ್ಲಿ ಪ್ರವಹಿಸಿದೆ. ಅದರ ಮೇಲೆ ವೇದಗಳ ಪ್ರಭಾವ ಒಂದೇರೀತಿಯಾಗಿರುತ್ತದೆ. ಹಿಂದುಗಳ ಜೀವನದ ಎಲ್ಲ ಶಾಖೆಗಳಲ್ಲಿಯೂ ಮತ,ಧರ್ಮ, ನೀತಿ, ಜೀವನ, ಸಾಮಾಜಿಕ ಆಚಾರ,ವ್ಯವಹಾರ ಎಲ್ಲದರಲ್ಲಿಯೂ ವೇದಗಳ ಪ್ರಭಾವ ಮುದ್ರೆ ಒಂದಲ್ಲ ಒಂದು ರೀತಿ ಇದ್ದೇ ಇರುತ್ತದೆ. ಆದುದರಿಂದ ಅದರ ಮೂಲವಾದ ವೇದವನ್ನು ತಿಳಿದಷ್ಟೂ ಅದರ ಸ್ವರೂಪ ಹೆಚ್ಚು ಸ್ಪಷ್ಟವಾಗುತ್ತದೆ. ಅಲ್ಲದೆ ಹಿಂದೆಯೇ ತಿಳಿಸಿರುವಂತೆ ಲೌಕಿಕ ಅಥವಾ ಧಾರ್ಮಿಕವಾದ ಯಾವ ಹಿಂದೂ ಜ್ಞಾನಕ್ಕೂ ವೇದಮೂಲವಿಲ್ಲದೆ ಇಲ್ಲ. ಕಾಳಿದಾಸನ ಕಾವ್ಯವೈಭವ, ಕಪಿಲನ ದರ್ಶನ ವೈಶಿಷ್ಟ್ಯ, ಜಯದೇವನ ನಾದ ಮಾಧುರ್ಯ, ವಾಲ್ಮೀಕಿಯ ಸರಳ ಮನೋಭಾವ ಇವೆಲ್ಲವೂ ವೈದಿಕ ಹಿನ್ನೆಲೆಯಿಲ್ಲದಿದ್ದರೆ ಅರ್ಥವಾಗುವುದಿಲ್ಲ. ಶುಷ್ಕವೂ ನೀರಸವೂ ಆಗುತ್ತವೆ. ಹಾಗೆಯೇ ಎಲ್ಲ ದರ್ಶನಗಳೂ ಎಲ್ಲ ಧರ್ಮಶಾಸ್ತ್ರಗಳೂ ವೇದಮೂಲವಾದವು.

ಪ್ರಪಂಚದ ಚರಿತ್ರೆಯನ್ನು ಸಂಪೂರ್ಣವಾಗಿ ತಿಳಿಯುವುದಕ್ಕೂ ವೇದಾಭ್ಯಾಸವು ಬಹಳ ಅವಶ್ಯಕ. ಈ ವಿಷಯದಲ್ಲಿ ಪಾಶ್ಚಾತ್ಯ ವೇದ ಪಂಡಿತನಾದ ಮ್ಯಾಕ್ಸ್‌ಮುಲರ್ ಹೀಗೆ ಹೇಳಿದ್ದಾನೆ: "ಪ್ರಪಂಚದ ಚರಿತ್ರೆಯಲ್ಲಿ ವೇದಗಳು, ಮತ್ತಾವ ಭಾಷಾ ಸಾಹಿತ್ಯಗಳೂ ಪೂರ್ಣಮಾಡಲಾಗದ ಕಾಲದ ಚರಿತ್ರೆಯನ್ನು ನಮಗೆ ತಿಳಿಸುವುವು. ಅವು ನಮ್ಮನ್ನು ಬಹಳ ಹಿಂದಿನ ಪ್ರಾಚೀನ ಕಾಲಕ್ಕೆ ತೆಗೆದುಕೊಂಡುಹೋಗಿ ಆಗಿನ ಕಾಲದ ಜನಾಂಗಗಳ ಆಚಾರವ್ಯವಹಾರವನ್ನು ಸ್ಪಷ್ಟಪಡಿಸುತ್ತವೆ. ಇವಿಲ್ಲದಿದ್ದರೆ ಅವರ ವಿಷಯವನ್ನು ಬರಿಯ ಊಹಾರಾಜ್ಯದ ಮೂಲಕ ಬಹುಸ್ಥೂಲವಾಗಿ ಮಾತ್ರ ಯೋಚಿಸಬೇಕಾಗಿತ್ತು. ಪ್ರಪಂಚದ ಜನಾಂಗಗಳ ಚರಿತ್ರೆಯಲ್ಲಿ ಆಸಕ್ತಿ ಇರುವವರೆಗೂ, ಪುಸ್ತಕ ಭಂಡಾರಗಳಲ್ಲಿ ಮತ್ತು ಪ್ರದರ್ಶನಾಲಯಗಳಲ್ಲಿ ಪ್ರಾಚೀನ ವಸ್ತುಗಳನ್ನು ಶೇಖರಿಸುವ ಆಸೆ ಇರುವವರೆಗೂ ಋಗ್ವೇದಕ್ಕೆ ಅಗ್ರಸ್ಥಾನವನ್ನು ತಪ್ಪಿಸಲು ಸಾಧ್ಯವಿಲ್ಲ."

ಇಷ್ಟೇ ಅಲ್ಲದೆ ಆಧುನಿಕ ತುಲನಾತ್ಮಕ ಭಾಷಾದೃಷ್ಟಿಯಿಂದಲೂ ಋಗ್ವೇದಕ್ಕೆ ಪ್ರಧಾನವಾದ ಸ್ಥಾನವಿದೆ. ಈ ಅಧ್ಯಯನ ಕಳೆದ ಶತಮಾನದಿಂದ ಮಾತ್ರ ಪ್ರಾರಂಭವಾಗಿದ್ದರೂ ಈ ಸಂಶೋಧನೆಯ ಫಲವಾಗಿ ಭಾಷೆಗಳಲ್ಲೆಲ್ಲ ವೇದ ಭಾಷೆಯೇ ಪರಮ ಪ್ರಾಚೀನವಾದುದೆಂದು ಸಿದ್ಧಾಂತವಾಗಿದೆ. ಗ್ರೀಕ್,ಲ್ಯಾಟಿನ್ ಭಾಷೆಗಳಿಗಿಂತ ಸಂಸ್ಕೃತ ಭಾಷೆಯು ಪೂರ್ವಕಾಲದ್ದೆಂದು ಅಂಗೀಕೃತವಾಗಿದೆ. (ಕಾವ್ಯ ಸಂಸ್ಕೃತಕ್ಕಿಂತ ವೇದಸಂಸ್ಕೃತವು ಪ್ರಾಚೀನವಾದುದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ವೇದಗಳು ಕ್ರಿ ಪೂ ೩೦೦೦ ವರ್ಷಗಳಿಗಿಂತ ಹಿಂದಿನದೆಂದು ಹೇಳಲು ಸಂದೇಹವಿಲ್ಲ. ಮಾನವ ಚರಿತ್ರೆಯನ್ನೂ ಪ್ರಪಂಚ ಚರಿತ್ರೆಯನ್ನೂ ಅಭ್ಯಾಸ ಮಾಡುವಲ್ಲಿ ಮೊದಲು ವೇದವನು ಅಭ್ಯಾಸ ಮಾಡದೆ ಮುಂದುವರಿಯಲು ಸಾಧ್ಯವೇ ಇಲ್ಲ.

ಪ್ರಾಚೀನ ಆರ್ಯರ ದೃಷ್ಟಿಯಲ್ಲಿ ವೇದವು ಪರಮ ಪವಿತ್ರವೂ ಅನಂತವೂ ಆದುದು. ಈಗ ಉಪಲಬ್ಧವಾಗಿರುವ ವೇದಭಾಗ ವೇದರಾಶಿಯ ಏಕದೇಶಮಾತ್ರ. ಯಜುರ್ ಬ್ರಾಹ್ಮಣದ ಮೂರನೆಯ ಅಷ್ಟಕದ ಹತ್ತನೆಯ ಪ್ರಶ್ನದಲ್ಲಿ ಭರದ್ವಾಜರಿಗೆ ಮೂರು ಆಯುಸ್ಸುಗಳಲ್ಲಿಯೂ ವೇದರಾಶಿಯನ್ನು ಸ್ವಾಧೀನಮಾಡಿಕೊಳ್ಳಲಾಗಲಿಲ್ಲವೆಂದೂ ವೇದಪರ್ವತದ ಏಕದೇಶವನ್ನು ಮಾತ್ರ ಅವರು ನಾಲ್ಕನೆಯ ಆಯಸ್ಸಿನಲ್ಲಿ ಪಡೆದು ಅಭ್ಯಾಸ ಮಾಡಿ ಅದರಿಂದ ಅಮೃತತ್ವವನ್ನು ಪಡೆದರೆಂದೂ ಹೇಳಿದೆ. ಅದೇ ಈಗಿರುವ ವೇದರಾಶಿಯೆಂದು ಅಂಗೀಕೃತವಾಗಿದೆ.

ಅಲ್ಲದೆ ವೇದಗಳು ಯಾರಿಂದಲೂ ರಚಿತವಾದುವಲ್ಲ. ಅವು ಅಪೌರುಷೇಯಗಳು, ನಿತ್ಯವಾದುವು. ಸ್ವಯಂಪ್ರಮಾಣವಾದುವು. ಕಾಲಗಣನೆಗೆ

ಡಾ॥ ಎನ್. ಅನಂತರಂಗಾಚಾರ್

ನಿಲುಕದವು ಎಂಬುದು ಪ್ರಾಚೀನರ ಅಭಿಪ್ರಾಯ. ಉಪನಿಷದ್ವಾಕ್ಯಗಳ ಪ್ರಕಾರ ವೇದಗಳು ಪರಮಾತ್ಮನ ಮುಖದಿಂದಲೇ ನಿಶ್ವಾಸರೂಪವಾಗಿ ಹೊರಟಿರುವುವು. ಇವುಗಳ ಸಹಾಯದಿಂದಲೇ ಅವನು ಸಮಸ್ತ ಪ್ರಪಂಚವನ್ನು ಸೃಷ್ಟಿಸಿದನು. ಅವನೇ ಸಮಸ್ತ ವಿದ್ಯೆಗಳಿಗೂ ಉತ್ಪನ್ನಸ್ಥಾನವಾಗಿರುವವನು. ಈ ವೇದವು ಮಾನವರಿಗೆ ಲಭಿಸಿದ ರೀತಿಯನ್ನು ಯಾಸ್ಕರು ತಮ್ಮ "ನಿಘಂಟು"ವಿನ ವ್ಯಾಖ್ಯಾನದ ಆರಂಭದಲ್ಲಿ ಹೀಗೆ ವಿವರಿಸಿದ್ದಾರೆ. 'ಧರ್ಮ ಋಷಿಗಳಿಗೆ ಕಾಣಿಸಿತು -ಅದನ್ನು ಅವರು ತಮ್ಮ ವಂಶೀಯರಿಗೆ ಅನುಗ್ರಹಿಸಿದರು. ಆದುದರಿಂದಲೇ ಅದಕ್ಕೆ ಅಷ್ಟು ಪ್ರಾಶಸ್ತ್ಯ ಮತ್ತು ಪವಿತ್ರತೆ'.

ವೇದಗಳ ಅಪೌರುಷೇಯತ್ವ ನಿತ್ಯತ್ವ ಸ್ವಯಂಪ್ರಮಾಣದ ವಿಷಯ ಭಾರತೀಯರಲ್ಲಿಯೇ ವಿಶೇಷ ಚರ್ಚೆ ನಡೆದಿದೆ. ಸಾಯಣರು ತಮ್ಮ ಋಗ್ವೇದಭಾಷ್ಯದ ಭೂಮಿಕೆಯಲ್ಲಿ ಪ್ರತಿಪಕ್ಷ ವಾದಗಳನ್ನು ಪೂರ್ವ ಪಕ್ಷವಾಗಿ ಸಂಗ್ರಹಿಸಿ ಅವುಗಳನ್ನು ಖಂಡಿಸಿ ಮುಂದೆ ಪ್ರಾಚೀನ ಮತವನ್ನು ಸಿದ್ಧಾಂತ ಮಾಡಿದ್ದಾರೆ. ಪ್ರತ್ಯಕ್ಷ ಪ್ರಮಾಣವೊಂದನ್ನೇ ಅಂಗೀಕರಿಸುವ ಚಾರ್ವಾಕರೂ ಪ್ರತ್ಯಕ್ಷಾನುಮಾನುಗಳೆಂಬ ಎರಡು ಪ್ರಮಾಣಗಳನ್ನಂಗೀಕರಿಸುವ ಜೈನ ಬೌದ್ಧರು ವಿನಾ ಉಳಿದ ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವ ಮೀಮಾಂಸಾ, ಉತ್ತರ ಮೀಮಾಂಸಾ ದರ್ಶನಗಳೂ ವೇದಗಳನ್ನು ಪ್ರಮಾಣವೆಂದೂ ನಿತ್ಯವೆಂದೂ ಅಂಗೀಕರಿಸಿವೆ. ಈ ಎಲ್ಲ ಪ್ರಾಚೀನರಿಗೂ ವೇದಪ್ರಾಮಾಣ್ಯವು ಒಪ್ಪಿಗೆಯಾದರೂ ಆನುಪೂರ್ವಿ ನಿತ್ಯವೆ ಅರ್ಥ ನಿತ್ಯವೇ ಎಂಬ ಅಂಶದಲ್ಲಿ ಭಿನ್ನಾಭಿಪ್ರಾಯಗಳಿವೆ. ಯಾಸ್ಕರು ವೇದ ಮಂತ್ರಗಳಿಗೆ ಶಬ್ದಾರ್ಥಗಳ ನಿತ್ಯತ್ವವನ್ನೂ ಸಿದ್ಧಾಂತ ಮಾಡಿದ್ದಾರೆ. ಪತಂಜಲಿಗಳು ತಮ್ಮ ಮಹಾಭಾಷ್ಯದಲ್ಲಿ ವರ್ಣಾನುಪೂರ್ವಿಯು ಅನಿತ್ಯವೆಂದು ಸೂಚಿಸಿದ್ದಾರೆ. ಪೂರ್ವ ಮೀಮಾಂಸಾಕಾರರೂ ಈ ವಾದವನ್ನೇ ಪುಷ್ಟೀಕರಿಸಿದ್ದಾರೆ.

ಆದರೆ ಆಧುನಿಕ ವಿಮರ್ಶಕರು ವೇದವು ಪೌರುಷೇಯವೆಂದೇ ವಾದಿಸುತ್ತಾರೆ. ಆರ್ಯರು ಭಾರತಕ್ಕೆ ಬರುವ ಮೊದಲೇ ಸ್ತೋತ್ರರೂಪವಾದ ಸೂಕ್ತಗಳಿಂದ ದೇವತೆಗಳನ್ನು ಪೂಜಿಸುತ್ತಿದ್ದರೆಂದೂ, ಪ್ರತಿಯೊಂದು ಸೂತ್ರಕ್ಕೂ ಉಕ್ತವಾಗಿರುವ ಋಷಿಗಳೇ ಅವುಗಳ ಕರ್ತೃಗಳೆಂದೂ, ಅವರು ತಾವು ವ್ಯವಹರಿಸುತ್ತಿದ್ದ ಭಾಷೆಯಲ್ಲಿಯೇ ನಾನಾ ಛಂದಸ್ಸುಗಳಲ್ಲಿ ರಚಿಸಿದ್ದಾರೆಂದು ಅವರು ಅಭಿಪ್ರಾಯಪಡುತ್ತಾರೆ. ಅದನ್ನು ಅವರು ವೇದವಾಕ್ಯಗಳಿಂದಲೇ ಸಿದ್ಧಾಂತ ಮಾಡಲು ಪ್ರಯತ್ನಪಟ್ಟಿದ್ದಾರೆ.

ವೇದವು ಭಿನ್ನ ಕರ್ತೃಕಗಳಾಗಿರುವಂತೆಯೇ ಭಿನ್ನ ಕಾಲದಲ್ಲಿ ರಚಿತವಾದುದೆಂಬುದು ಆಧುನಿಕರ ಮತ. ಋಷಿಗಳು ಪ್ರಕೃತಿಯಲ್ಲಿ ತಾವು ಕಂಡ ಬೆಡಗನ್ನು ಅವರು ಇಲ್ಲಿ ಅದ್ಭುತವಾಗಿ ವರ್ಣಿಸಿದ್ದಾರೆ. ದಿನಬಳಕೆಯಲ್ಲಿದ್ದ ಅಂಶಗಳನ್ನು ಹೊರಗೆಡಹಿದ್ದಾರೆ. ಹೀಗಾಗಿ ಋಷಿಗಳ ಕಾಲದ ಇತಿಹಾಸವನ್ನು ಇಲ್ಲಿ ಕಾಣಬಹುದು. ನಕ್ಷತ್ರ ಶಾಸ್ತ್ರಗಳಲ್ಲಿ ಅದ್ವಿತೀಯವಾದ ಅವರು ನಕ್ಷತ್ರಗಳ ವಿವಿಧ ಚಾರಗಳನ್ನು ಇಲ್ಲಿ ಚಿತ್ರಿಸಿದ್ದಾರೆ. ಸೃಷ್ಟಿರಹಸ್ಯವನ್ನು ಭೇದಿಸಲು ಹೊರಟು ತಮ್ಮ ಗಾಢವಾದ ಅನುಭವವನ್ನು ತಿಳಿಸಿದ್ದಾರೆ. ಆದುದರಿಂದ ವೇದಕ್ಕೆ ಪ್ರಾಕೃತಿಕ, ಐತಿಹಾಸಿಕ, ಜ್ಯೋತಿಷಿಕ ಮತ್ತು ಆಧ್ಯಾತ್ಮಿಕ ಅರ್ಥವ್ಯಕ್ತಿಗಳು ಉಂಟೆಂಬುದು ಅರ್ವಾಚೀನರ ಜಿಜ್ಞಾಸೆ.

ಇದರ ಪ್ರಕಾರ ಋಗ್ವೇದದಲ್ಲಿ ಬರುವ ಅನೇಕ ದೇವತೆಗಳು ಪ್ರಕೃತಿಯ ನಾನಾ ಮುಖಗಳಾದ ಸೋಮ, ಸೂರ್ಯ, ಅಗ್ನಿ, ಮರುತ್ ಮೊದಲಾದ ದೇವತೆಗಳು ಪ್ರಕೃತಿಯ ವಿವಿಧ ರೂಪಗಳು. ಇಂದ್ರ, ವರುಣ, ಪೂಷನ್, ರುದ್ರ ಮೊದಲಾದ ದೇವತೆಗಳೂ ಪ್ರಕೃತಿಯ ಒಂದೊಂದಂಶವನ್ನು ಪ್ರತಿನಿಧಿಸುತ್ತಾರೆ.

ಹಾಗೆಯೇ ವೇದವು ಆರ್ಯ ದಸ್ಯುಗಳ ಯುದ್ಧದ ಹಿನ್ನೆಲೆಯಲ್ಲಿ ರಚಿತವಾಗಿದೆ. ಸುದಾಸ, ಯದು, ಪುರು ಮೊದಲಾದ ರಾಜವಂಶಗಳ ಉಲ್ಲೇಖವಿದೆ. ದಾಶರಾಜ್ಞಯುದ್ಧವೆಂಬುದು ಇಂತಹುದೇ. ರಾಜರಸ್ತುತಿ, ಆರ್ಯರ ಆಚಾರ ವ್ಯವಹಾರಗಳ ವಿವರಣೆ, ಆಡಳಿತಕ್ರಮ ಮೊದಲಾದುವುಗಳನ್ನು ವರ್ಣಿಸಿ ವಿಶ್ವದಲ್ಲಿಯೇ ಅತಿ ಪ್ರಾಚೀನವಾದ ಆರ್ಯರ ಇತಿಹಾಸದಿಂದ ಅದು ತುಂಬಿದೆ.

ಶ್ರೀ ಬಾಲಗಂಗಾಧರ ತಿಲಕ್, ಎಸ್. ಬಿ. ದೀಕ್ಷಿತ್, ಯಾಕೋಬ್ ಮೊದಲಾದವರ ಸಿದ್ಧಾಂತದ ಪ್ರಕಾರ ವೇದಗಳಲ್ಲಿ ಬರುವ ಹೆಸರುಗಳೆಲ್ಲ ಜ್ಯೋತಿಶ್ಶಾಸ್ತ್ರಕ್ಕೆ ಪರಿಚಿತವಾದ ನಕ್ಷತ್ರಗಳ ಹೆಸರುಗಳು. ಇದೆಲ್ಲಕ್ಕಿಂತಲೂ ವೇದದ ಆಧ್ಯಾತ್ಮಿಕ ಅರ್ಥವ್ಯಕ್ತಿ ಅತಿ ಮುಖ್ಯವಾದುದೆಂದು ಆಧುನಿಕ ವಿಮರ್ಶಕರು ಅಂಗೀಕರಿಸಿದ್ದಾರೆ. ಋಗ್ವೇದದಲ್ಲಿಯೇ ಕೆಲವು ಋಷಿಗಳಿಗೆ ದೈವದೃಷ್ಟಿಯುಂಟಾಯಿತೆಂದೂ, ದೈವೀವಾಕ್ಕು ಋಷಿಗಳನ್ನು ಸೇರಿತೆಂದೂ ಹೇಳಿದೆ. ಋಷಿಗಳು ತಮ್ಮ ಬುದ್ಧಿ ಶಕ್ತಿಯಿಂದ, ಸಂಸ್ಕಾರ ಮಹತ್ವದಿಂದ, ವೈವಿಧ್ಯ ಪೂರ್ಣವಾಗಿರುವ ಜಗತ್ತಿನಲ್ಲಿ ಏಕತಾನನಾದ ಪರಮಾತ್ಮನನ್ನು ಕಂಡು, ತಾವು ಪಡೆದ ಆತ್ಮ ಸಾಕ್ಷಾತ್ಕಾರವನ್ನು ಮಂತ್ರಗಳಲ್ಲಿ ಅಡಕಮಾಡಿದ್ದಾರೆ. ಆದುದರಿಂದ ವೇದಕ್ಕೆ ಆಧ್ಯಾತ್ಮಿಕ ಅರ್ಥವೇ ಪ್ರಧಾನವಾದುದೆಂಬುದು ಇವರ ಮತ. ಈ ಕೆಲವು ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ವೇದಗಳ ಮಹತ್ತ್ವದ ವಿಷಯದಲ್ಲಿ ಎಲ್ಲರೂ ಮುಕ್ತ ಕಂಠದಿಂದ ಹೊಗಳಿದ್ದಾರೆ. ವೇದಾಭ್ಯಾಸ ಮಾಡಿದಿದ್ದರೆ ವಿದ್ಯಾಭ್ಯಾಸವೇ

ಪೂರ್ಣವಾಗುವುದಿಲ್ಲವೆಂಬುದರಲ್ಲಿ ಭಿನ್ನಾಭಿಪ್ರಾಯವೇ ಇಲ್ಲ.

ವೇದಗಳ ಆನುಪೂರ್ವಿಗಿಂತ ಅರ್ಥಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡಬೇಕೆಂಬುದು ಹಿಂದಿನ ಕಾಲದಿಂದ ವಿದಿತವಾದ ವಿಷಯ. ಯಾಸ್ಕರು ಈ ವಿಷಯದಲ್ಲಿ ಹೀಗೆ ಹೇಳಿದ್ದಾರೆ. "ವೇದದ ಅನುಪೂರ್ವಿಯನ್ನು ಮಂತ್ರ ತಿಳಿದು ಅರ್ಥವನ್ನು ತಿಳಿಯದವನು ಮೋಟ ಮರದ ಹಾಗೆ ಸ್ಥಿರಸನಾಗುತ್ತಾನೆ. ಅರ್ಥವನ್ನು ತಿಳಿದವನು ಸಮಸ್ತ ಮಂಗಳವನ್ನು ಪಡೆದು ಪಾಪರಹಿತನಾಗಿ ಸ್ವರ್ಗವನ್ನು ಸೇರುತ್ತಾನೆ. ಅರ್ಥಜ್ಞಾನವಿಲ್ಲದ ವೇದಾಭ್ಯಾಸವು ಬೆಂಕಿಯಿಲ್ಲದೆಡೆ ಹೇರಿಸಿದ ಒಣ ಸೌದೆಯಂತೆ ಸ್ವಲ್ಪವೂ ಜ್ವಲಿಸುವುದಿಲ್ಲ". ಅರ್ಥಜ್ಞಾನದ ಆವಶ್ಯಕತೆಯನ್ನು ಇಷ್ಟು ಒತ್ತಾಯಪಡಿಸಿದ್ದರೂ ಕಾಲಕ್ರಮದಲ್ಲಿ ಅದಕ್ಕೆ ವಿಶೇಷ ಗಮನ ಕೊಟ್ಟಂತೆ ಕಾಣುವುದಿಲ್ಲ. ಇತ್ತೀಚೆಗೆ ಪಾಶ್ಚಾತ್ಯ ಪಂಡಿತರು ವಿಮರ್ಶಾತ್ಮಕ ದೃಷ್ಟಿಯಿಂದ ಪರಿಶೀಲಿಸಲು ಪ್ರಾರಂಭಿಸಿದ ಮೇಲೆ ವೇದಾರ್ಥಕ್ಕೆ ಪ್ರಾಶಸ್ತ್ಯ ಬರುತ್ತಿರುವುದು ಸಂತೋಷದ ಸಂಗತಿ.

ವೇದವೆಂದರೇನು: ವೇದಶಬ್ದಕ್ಕೆ ಅತಿವ್ಯಾಪ್ತಿ ಅವ್ಯಾಪ್ತಿ ಗಳಿಲ್ಲದೆ ಸ್ಪಷ್ಟವಾಗಿ ನಿರ್ದೋಷವಾಗಿ ಅರ್ಥಹೇಳುವುದು ಕಷ್ಟ. 'ವೇದ' ಶಬ್ದ 'ವಿದ್'-ತಿಳಿ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಅಂದರೆ ವೇದವೆಂದರೆ ತಿಳಿವಿನಿಂದ ಕೂಡಿರುವುದು ಜ್ಞಾನಸಹಿತವಾದುದು ಎಂದು ಅರ್ಥವಾಗುತ್ತದೆ. ಸ್ಥೂಲವಾಗಿ ಜ್ಞಾನಪ್ರತಿಪಾದಕ ಗ್ರಂಥಗಳೆಂದು ಹೇಳಬಹುದು. ವೇದ ಭಾಷ್ಯಕಾರರು ಈ ಶಬ್ದಕ್ಕೆ ಭಿನ್ನ ಭಿನ್ನ ರೀತಿಗಳಲ್ಲಿ ವ್ಯಾಖ್ಯಾನಮಾಡಿದ್ದಾರೆ. ಒಟ್ಟಿನಲ್ಲಿ ಐಹಿಕಾಮುಷ್ಮಿಕ ಸುಖಸಾಧನ ಭೂತವಾದ ಧರ್ಮಜ್ಞಾನರಾಶಿಯನ್ನು ವೇದವೆಂದು ಕರೆಯಬಹುದು.

ಹಿಂದೆಯೇ ತಿಳಿಸಿರುವಂತೆ ವೇದಗಳು ಯಾರಿಂದಲೂ ರಚಿತವಾದುವಲ್ಲ, ಸ್ವಯಂಸಿದ್ಧವಾದವು, ನಿತ್ಯವಾದುವು. ವೇದಗಳನ್ನು ತತ್ತ್ವದಾನುಪೂರ್ವಿವಿಶಿಷ್ಟವಾಗಿಯೇ ಋಷಿಗಳು ತಮ್ಮ ತಪಃಶಕ್ತಿಯಿಂದ ಸಾಕ್ಷಾತ್ಕರಿಸಿಕೊಂಡ ಕಾರಣದಿಂದ ಇವು ದೃಷ್ಟವಾದುವೆಂದು ಅವರು ದ್ರಷ್ಟಾರರೆಂದೂ ಪ್ರಸಿದ್ಧವಾಗಿದೆ. ಗುರು ಶಿಷ್ಯರೂಪದಲ್ಲಿ ಆ ಋಷಿಗಳಿಂದ ಇತರರು ಕೇಳಿ ಕಲಿತುಕೊಂಡುದುದರಿಂದ ಇದಕ್ಕೆ ಶ್ರುತಿಯೆಂದು ಹೆಸರು. ಶ್ರುತಿಯ ಆಧಾರದ ಮೇಲೆ ರಚಿತವಾದುದು 'ಸ್ಮೃತಿ'. ಶ್ರುತ್ಯರ್ಥದಿಂದ ದೂರವಾದಾಗ 'ಸ್ಮೃತಿ'ಗೆ ಅಸ್ತಿತ್ವವಿಲ್ಲ. ಅಂದರೆ ಶ್ರುತಿವಿರುದ್ಧವಾದುದು ಸ್ಮೃತಿಯಲ್ಲ.

ಯಜ್ಞೋಪಯುಕ್ತವಾದ ವೇದಗಳು ಮೊದಲು ಒಂದೇ ಆಗಿದ್ದುವೆಂದೂ ಕಾಲಕ್ರಮದಲ್ಲಿ ವೇದವ್ಯಾಸರು ಯಜ್ಞದಲ್ಲಿ ಭಾಗಿಗಳಾಗುವ ಹೋತೃ, ಉದ್ಗಾತೃ, ಅಧ್ವರ್ಯು, ಬ್ರಹ್ಮ ಎಂಬ ನಾಲ್ವರು ಋತ್ವಿಕ್ಕುಗಳು ಉಪಯೋಗಿಸುವ ಕ್ರಮಕ್ಕನುಗುಣವಾಗಿ ವಿಭಾಗ ಮಾಡಿ ಚತುರ್ವೇದಗಳನ್ನಾಗಿಸಿದರೆಂದೂ ಪ್ರತೀತಿ.

ವೇದಗಳೆಲ್ಲಲ್ಲ ಋಗ್ವೇದವನ್ನೇ ಮೊದಲು ಹೇಳಿರುವುದರಿಂದಲೂ ಇತರ ವೇದಗಳಂತೆ ಮಂತ್ರಗಳೇ ಅಲ್ಲದೆ, ಪ್ರಾರ್ಥನೆಗಳೂ ಸ್ತುತ್ಯಾಶೀರ್ವಾದಗಳೂ ಶಪಥಾಭಿಶಾಪಗಳೂ ಸಂವಾದಸೂಕ್ತಗಳೂ ದಾನಸ್ತುತಿಗಳೂ ಇರುವುದರಿಂದ ಅಧುನಿಕರು ಋಗ್ವೇದವನ್ನೇ ಪರಮಪ್ರಾಚೀನವೆಂದು ಅಂಗೀಕರಿಸಿದ್ದಾರೆ. ಋಗ್ವೇದದಿಂದ ಅಧ್ವರ್ಯು ಬಳಸಬೇಕಾದ ಮಂತ್ರಗಳನ್ನು ಆರಿಸಿಕೊಂಡು ಯಜುರ್ವೇದವನ್ನು, ಉದ್ಗಾತೃಪಯುಕ್ತವಾದ ಮಂತ್ರ ಸಂಗ್ರಹದಿಂದ ಸಾಮವೇದವನ್ನೂ ರೂಪಿಸಿರಬೇಕೆಂದು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ. ಅಂದರೆ ಮೇಲೆ ತಿಳಿಸಿರುವಂತೆ ಋಗ್ವೇದದ ಪ್ರಥಕ್ಕರಣವೇ ಇತರ ವೇದಗಳೆಂಬ ವಾದವು ಅರ್ವಾಚೀನರದು. ಅಲ್ಲದೆ ಪ್ರಾರಂಭದಲ್ಲಿ ಋಗ್ಯಜುಸ್ಸಾಮವೇದಗಳೇ ಇದ್ದು 'ತ್ರಯೀ' ಎಂದು ಪ್ರಸಿದ್ಧವಾಗಿರಬೇಕು. ಅಥರ್ವವೇದವು ಅನಂತರ ಸೇರಿಕೊಂಡಿರಬೇಕು. ಪ್ರಾಚೀನರು ಅದನ್ನು ಅನಾದಿಯೆಂದು ಅಂಗೀಕರಿಸಿ ಬ್ರಹ್ಮ ವೇದವೆಂದು ಅದನ್ನು ಭಾವಿಸಿದ್ದಾರೆ. ಯಜ್ಞಸಿದ್ಧತೆಗಳೆಲ್ಲ ಅಧ್ವರ್ಯುವಿನಿಂದಲೇ ಮೊದಲು ಆಗಬೇಕಾಗಿರುವುದರಿಂದ ಆ ವೇದವೇ ಮೊದಲು ಅಸ್ತಿತ್ವಕ್ಕೆ ಬಂದಿರಬೇಕೆಂದು ತೋರಿ ಬಂದರೂ ವೈದಿಕರು ಋಗ್ವೇದಕ್ಕೆ ಪ್ರಾಶಸ್ತ್ಯವನ್ನು ಕೊಟ್ಟು ಅದನ್ನೇ ಮೂಲ ವೇದವೆಂದು ಅಂಗೀಕಾರ ಮಾಡಿದ್ದಾರೆ. ಸಾಯಣರು ಮೊದಲು ಯಜುರ್ವೇದಭಾಷ್ಯವನ್ನು ರಚಿಸಿದ್ದರೂ ಋಗ್ವೇದಕ್ಕೆ ಅಗ್ರಸ್ಥಾನವನ್ನಿತ್ತಿದ್ದಾರೆ. 'ಪುರುಷಸೂಕ್ತ'ದಲ್ಲಿ ಬರುವ 'ತಸ್ಮಾತ್ ಯಜ್ಞಾತ್ ಸರ್ವಹುತಃ ಋಚಃ ಸಾಮಾನಿ ಜಜ್ಞಿರೇ' ಎಂಬ ವಾಕ್ಯವು ಋಗ್ವೇದಕ್ಕೆ ಅಗ್ರಸ್ಥಾನವನ್ನು ಕೊಟ್ಟಿದೆ. ಯಜ್ಞಕಾರ್ಯಗಳಲ್ಲಿ ಅದಕ್ಕಿರುವ ಸ್ಥಾನವೂ ಅದಕ್ಕೆ ಪ್ರಾಮುಖ್ಯವನ್ನು ಹೆಚ್ಚಿಸಿದೆ. ಯಜುಸ್ಸಾಮಗಳಲ್ಲಿ ಎಲ್ಲಾದರೂ ಸಂದೇಹ ಬಂದರೆ ಅದನ್ನು ಋಗಾಧಾರದಿಂದಲೇ ಪೂರ್ಣ ಮಾಡಬೇಕೆಂಬ ಅಂಶವೂ ತೈತ್ತಿರೀಯ ವಾಕ್ಯದಿಂದ ಸ್ಪಷ್ಟಪಡುತ್ತದೆ.

ವೇದವಿಭಾಗಗಳು: ವೇದ ಸಾಹಿತ್ಯವನ್ನು ವಿಮರ್ಶಕರು ಅವುಗಳ ಸ್ವರೂಪಕ್ಕನುಗುಣವಾಗಿ ಸಂಹಿತೆ, ಬ್ರಾಹ್ಮಣ, ಆರಣ್ಯಕೋಪನಿಷತ್ತುಗಳು ಎಂಬ ಮೂರು ಭಾಗಗಳಾಗಿ ವಿಂಗಡಿಸಿದ್ದಾರೆ. ಪ್ರತಿಯೊಂದು ವೇದಕ್ಕು ಪ್ರತ್ಯೇಕವಾದ ಸಂಹಿತೆ, ಬ್ರಾಹ್ಮಣ, ಆರಣ್ಯಕೋಪನಿಷತ್ತುಗಳಿವೆ. ಇವು ಸಾಹಿತ್ಯದ ಪೂರ್ವಭಾಗ, ವೇದಗಳ ಸಂರಕ್ಷಣೆಗಾಗಿಯೂ ಸುಬೋಧನೆಗಾಗಿಯೂ ಇರುವ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಎಂಬ ಆರು ವೇದಾಂಗಗಳು ವೇದಸಾಹಿತ್ಯದ ಉತ್ತರಭಾಗ

ಸಂಹಿತೆಗಳು : ಬೇರೆ ಬೇರೆ ಋಷಿಗಳಿಂದ ದೃಷ್ಟವಾದ ಮಂತ್ರಗಳನ್ನು ಏಕತ್ರ ಒಂದು ಗೂಡಿಸಿರುವುದರಿಂದ ಇವು ಸಂಹಿತೆ ಎನಿಸಿಕೊಳ್ಳುತ್ತವೆ. ಸಂಹಿತೆಗಳನ್ನು ಸಂಗ್ರಹಿಸಿದವರು ವೇದವ್ಯಾಸರೆಂಬುದು ಸಂಪ್ರದಾಯಮೂಲ-ಸಾರವಾದ ಭಾವನೆ.

ಋಗ್ವೇದ ಸಂಹಿತೆಯು ಒಂದು ಗ್ರಂಥವಲ್ಲ. ಅನೇಕ ಗ್ರಂಥಗಳ ಸಂಕಲನ. ಶಬ್ದ, ಶೈಲಿ, ವ್ಯಾಕರಣ, ಛಂದಸ್ಸು ಮತ್ತು ಅಭಿಪ್ರಾಯಗಳಲ್ಲಿ ಭಿನ್ನವಾಗಿದೆ. ಸಂಕಲನವಾಗುವುದಕ್ಕೆ ಎಷ್ಟೋ ಕಾಲದ ಮುಂಚಿನಿಂದ ಬಿಡಿ ಬಿಡಿಯಾಗಿದ್ದಿರಬೇಕು. ವೇದಸಾಹಿತ್ಯಗಳಿಗೆ ಭಿನ್ನವಾಗಿ ಋಗ್ವೇದವು ಭಾಷೆ ಮತ್ತು ಭಾವನೆಗಳ ದೃಷ್ಟಿಯಿಂದ ಪ್ರತ್ಯೇಕವಾದ ಔನ್ನತ್ಯವನ್ನೂ ಗಾಂಭೀರ್ಯವನ್ನೂ ಪಡೆದಿದೆ. ಇದಕ್ಕೆ ಪ್ರತ್ಯೇಕವಾದ ವಿಶಿಷ್ಟ ಮುದ್ರೆಯಿದೆ. ಅದರಲ್ಲಿ ಐಕ್ಯತೆಯಿರುವ ಹಾಗೆಯೇ ವೈವಿಧ್ಯವೂ ಇದೆ. ಋಗ್ವೇದವು ಸಹಜವಾಗಿ ಸ್ತೋತ್ರರೂಪದಲ್ಲಿದ್ದರೂ ಅದರಲ್ಲಿ ನಿಷ್ಕೃಷ್ಟ ಜೋಡಣೆ, ವಿಭಾಗ ಮೊದಲಾದವು ಸ್ಪಷ್ಟವಾಗಿ ಕಾಣುವುವು. ಅದನ್ನು ಎರಡು ರೀತಿಯಲ್ಲಿ ವಿಭಾಗ ಮಾಡುವುದುಂಟು. ಮೊದಲನೆಯದು ಅಷ್ಟಕ,ಅಧ್ಯಾಯ ಮತ್ತು ವರ್ಗಗಳಾಗಿ ವಿಭಾಗಿಸುವಿಕೆ, ಋಗ್ವೇದವು ಎಂಟು ಅಷ್ಟಕಗಳಾಗಿಯೂ, ಒಂದೊಂದೂ ಎಂಟು ಅಧ್ಯಾಯಗಳಾಗಿಯೂ, ಒಂದೊಂದು ಅಧ್ಯಾಯವೂ ಅನೇಕ ವರ್ಗಗಳಾಗಿಯೂ, ಒಂದೊಂದು ವರ್ಗವೂ ಸುಮಾರು ಐಯ್ದು ಋಕ್ಕುಗಳಿಂದ ಕೂಡಿದುದಾಗಿಯೂ ಇದೆ. ಇದು ಅಭ್ಯಾಸಕ್ಕೆ ವಿಶೇಷ ಸೌಕರ್ಯವಾಗಿರುವುದರಿಂದ ವೈದಿಕರಲ್ಲಿ ರೂಢಿಯಾಗಿದೆ. ಆದರೆ ಬಹು ಯಾಂತ್ರಿಕವಾಗಿದೆ.

ಎರಡನೆಯ ರೀತಿಯ ವಿಭಾಗವು ಕೇವಲ ಶಾಸ್ತ್ರೀಯವಾಗಿಯೂ ಐತಿಹಾಸಿಕವೂ ಆದ ತತ್ತ್ವಗಳಿಂದ ಕೂಡಿದೆ. ಇದರ ಪ್ರಕಾರ ಋಕ್ಸಂಹಿತೆಯು ಹತ್ತು ಮಂಡಲಗಳಾಗಿ ವಿಭಾಗವಾಗಿದೆ. ಮೊದಲನೆಯ ಮಂಡಲದಲ್ಲಿ ೨೪, ಎರಡನೆಯದರಲ್ಲಿ ೪, ಮೂರು ಮತ್ತು ನಾಲ್ಕರಲ್ಲಿ ೫, ಆರು ಏಳರಲ್ಲಿ ೬, ಎಂಟರಲ್ಲಿ ೧೦, ಒಂಬತ್ತರಲ್ಲಿ ೭ ಹತ್ತರಲ್ಲಿ ೧೨ ಅನುವಾಕಗಳಿವೆ. ಒಂದೊಂದು ಅನುವಾಕಗಳಲ್ಲಿಯೂ ಅನೇಕ ಸೂಕ್ತಗಳಿವೆ. ಒಂದೊಂದು ಸೂಕ್ತವೂ ಅನೇಕ ಋಕ್ಕುಗಳಿಂದ ಕೂಡಿದೆ. ಪ್ರತಿಯೊಂದು ಸೂಕ್ತಕ್ಕೂ ಒಬ್ಬ ಋಷಿ, ಒಂದು ದೇವತೆ ಒಂದು ಛಂದಸ್ಸು ಇದೆ. ಅವುಗಳ ಪರಿಚಯವಿಲ್ಲದೆ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಸೂಕ್ತಗಳ ಅರ್ಥವೇ ಆಗುವುದಿಲ್ಲ. ಕಾತ್ಯಾಯನರ 'ಸರ್ವಾನುಕ್ರಮಣಿ'ಯ ಪ್ರಾರಂಭದಲ್ಲಿ ಋಷಿ ಛಂದಸ್ಸು ದೇವತೆಗಳ ವಿವರಣೆಯನ್ನು ಈ ರೀತಿ ಹೇಳಿದ್ದಾರೆ-'ಯಸ್ಯವಾಕ್ಯಂ ಸ ಋಷಿಃ ಯಾತೇ ನೋಚ್ಯತೇ ಸಾ ದೇವತಾಃ; ಯದಕ್ಷರ ಪರಿಮಾಣಂ ತಚ್ಛಂದಃ'. ವೈದಿಕರ ಅಭಿಪ್ರಾಯದ ಪ್ರಕಾರ ಋಷಿಗಳು ಸೂಕ್ತಗಳ ಕರ್ತೃಗಳಲ್ಲ ದ್ರಷ್ಟಾರರು. ಇದನ್ನು ಸಾಯಣರು 'ಅತೀಂದ್ರಿಯಸ್ಯ ವೇದಸ್ಯ ಪರಮೇಶ್ವರಾನುಗ್ರಹೇಣ ಪ್ರಥಮತೋ ದರ್ಶನಾತ್ ಋಷಿತ್ವಂ' ಎಂಬ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ.

ಋಗ್ವೇದದಲ್ಲಿ ಸ್ತುತರಾದ ದೇವತೆಗಳಲ್ಲಿ ಅಗ್ನಿ, ಇಂದ್ರ, ವರುಣ, ಅಶ್ವಿನೀ ದೇವತೆಗಳು, ಮರುತ್ತು, ವಾಯು, ಆದಿತ್ಯ, ಸವಿತೃ, ಉಷಸ್, ರಾತ್ರಿ, ವಿಷ್ಣು, ರುದ್ರ, ಸೋಮ, ಅವಃ-ಇವರು ಮುಖ್ಯರಾದವರು. ಅಗ್ನಿ ಮತ್ತು ಇಂದ್ರ ವಿಷಯಕವಾದ ಸೂಕ್ತಗಳೇ ಹೆಚ್ಚು, ಅಗ್ನಿಯು ಮೂರು ರೂಪಗಳಲ್ಲಿ ಜನರಿಗೆ ಸಹಾಯ ಮಾಡುತ್ತಾನೆ. ಬೆಳಕನ್ನು ನೀಡುವುದು ಅವನ ಪ್ರಧಾನ ಶಕ್ತಿ. ಇಂದ್ರನು ಸರ್ವಗುಣೋಪೇತ. ಇವನ್ನು ಎಲ್ಲ ವಿಧವಾದ ಶತ್ರುಗಳನ್ನು ನಾಶಮಾಡಿ ಜನಗಳಿಗೆ ಶಾಂತಿ ಸೌಖ್ಯಗಳನ್ನುಂಟು ಮಾಡುತ್ತಾನೆ. ಸೋಮನೆಂಬ ದೇವತೆ ಚಂದ್ರ ಮತ್ತು ಈಶ್ವರಾಂಶ ಸಂಭೂತನು. ಒಂಬತ್ತನೆಯ ಮಂಡಲವೇ ಈತನ ಪ್ರಾರ್ಥನೆಗೆ ಮೀಸಲು. ಈತನು ಸೋಮರಸದಿಂದ ಆನಂದವನ್ನೂ ಹೆಚ್ಚಿಸುತ್ತಾನೆ. ವರುಣ ಧರ್ಮರಕ್ಷಕ. ದುಷ್ಟ ಶಿಕ್ಷಕ. ಸವಿತೃ, ಸೂರ್ಯ, ಪೂಷನ್, ಮಿತ್ರ, ವಿಷ್ಣು, ಇವು ಐದೂ ಏಕದೇವತಾಕವಾದ ಹೆಸರು. (ವಿಷ್ಣುವಿಗೆ ಇಲ್ಲಿ ವಿಶೇಷ ಸ್ಥಾನವಿಲ್ಲ) ಇವರು ಬೆಳಕು ಶಾಖಗಳನ್ನು ಕೊಡುವರು. ಉಷಸ್ಸು ಸೂರ್ಯನ ಹೆಂಡತಿ. ಇವಳೇ ಪ್ರಧಾನ. ಪ್ರತಿದಿನ ಉದಿಸಿ ಜನರ ಜೀವದುಸಿರಾಳಾಗಿದ್ದಾಳೆ. ಇವರೆಲ್ಲರನ್ನೂ ಪ್ರಾರ್ಥಿಸಿ ಯಜ್ಞದ ಮೂಲಕ ತೃಪ್ತಿ ಪಡಿಸಿ ಅದಕ್ಕೆ ಪ್ರತಿಯಾಗಿ ತಮಗೆ ಬೇಕಾದ ಸರ್ವವಿಧವಾದ ಸೌಖ್ಯವನ್ನು ಪಡೆಯುವುದಕ್ಕೆ ಋಗ್ವೇದ ಸಂಹಿತೆಗಳು ಸಾಧನಗಳಾದರೂ ನಿಷ್ಕಾಮದಿಂದ ಯಾವ ಪ್ರತಿಫಲವನ್ನೂ ಅಪೇಕ್ಷಿಸದೇ ಪ್ರಾರ್ಥನಾದೃಷ್ಟಿಯಿಂದಲೇ ಇರುವ ಅನೇಕ ಸೂಕ್ತಗಳೂ ಇವೆ.

ಯಜುರ್ವೇದ ಸಂಹಿತೆ ಸಂಪೂರ್ಣವಾಗಿ ಛಂದೋಬದ್ಧವಾಗಿಲ್ಲ. ಈ ವೇದವು ಅಧ್ವರ್ಯುವೇದ. ಇದು ಶುಕ್ಲ ಕೃಷ್ಣವೆಂದು ಎರಡು ಭಾಗವಾಗಿದೆ. ಶುಕ್ಲಯಜುರ್ವೇದಕ್ಕೆ ವಾಜಸನೇಯ ಯೆಂಬ ಹೆಸರೂ ಉಂಟು. ಶುಕ್ಲಯಜುರ್ವೇದವು ಬ್ರಾಹ್ಮಣಗಳ ಸಂಬಂಧವಿಲ್ಲದೆ ಶುದ್ಧವಾಗಿರುವುದೂ, ಕೃಷ್ಣಯಜುರ್ವೇದವು ಮಂತ್ರ ಬ್ರಾಹ್ಮಣಗಳಿಂದ ಕೂಡಿರುವುದೂ ಈ ಹೆಸರುಗಳು ಬರ ಕಾರಣವಿರಬೇಕು.

ಶುಕ್ಲ ಅಥವಾ ವಾಜಸನೇಯ ಸಂಹಿತೆ ಕಾಣ್ವ ಮತ್ತು ಮಾಧ್ಯಂದಿನ ಎಂಬ ಎರಡು ಶಾ ಗಳಲ್ಲಿ ಉಪಲಬ್ಧವಾಗಿದೆ. ಇದು ಪೂರ್ಣವಾ ಛಂದೋಬದ್ಧವಾಗಿದೆ. ಇದು ೪೦ ಅಧ್ಯಾಯಗ ಗಿಯೂ, ೧೯೭೫ ಕಂಡಿಕೆಗಳಾಗಿಯೂ ವಿಭಾ ವಾಗಿದೆ. ಮೊದಲ ೨೫ ಅಧ್ಯಾಯಗಳು ಯ ಗಳ ಸಾಮಾನ್ಯ ವಿಧಿಯನ್ನು ಕುರಿತುದು. ಅ ಳಲ್ಲಿರುವ ವಿಷಯ ಈ ರೀತಿಯಾಗಿದೆ-೧-೨ ದ ಪೂರ್ಣಮಾಸ, ೩ ಅಹೋರಾತ್ರ, ಚಾ ಮಾಸ್ಯ ೪-೮ ಸೋಮಯಜ್ಞ ೯-೧೦ ವಾ ಪೇಯ, ರಾಜಸೂಯ-ಯಜ್ಞಾಂಗ ಮಂ ಗಳು. ೧೧-೧೮ ವೇದಿ ನಿರ್ಮಾಣ ಮೊದ ದವು. ೧೯-೨೧ ಸೌತ್ರಾಮಣಿ, ಸೋಮ ನಾದಿ ದೋಷ ಪರಿಹಾರಕ್ಕಾಗಿ ಮಾಡುವ ಕರ ೨೨ ಅಶ್ವಮೇಧ. ಮುಂದಿನ ೧೫ ಅಧ್ಯಾಯಗ ಖಿಲಗಳು-ಅನುಬಂಧದಂತಿವೆ. ಉಪಲ ಮ ಮಹೀಧರ ವ್ಯಾಖ್ಯಾನಗಳಲ್ಲಿ ೨೬-೨೯ ನೇ ಅಧ್ಯಾಯಗಳಲ್ಲಿ ಪೂರ್ವ ಸೂಚಿತವಾದ ಯ ವಿದ್ಯೆಗಳನ್ನೂ ೩೦-೩೯ ರಲ್ಲಿ ಪುರುಷಮೇಧ, ಸ ಮೇಧ, ಪಿತೃಮೇಧ, ಪ್ರವರ್ಗ್ಯ ವಿದ್ಯೆಗಳನ ವರ್ಣಿಸಿದೆ. ಕೊನೆಯ ಅಧ್ಯಾಯವೇ ಈಶಾ ಸ್ಯೋಪನಿಷತ್. ಇದು ಯಜ್ಞ ಸಂಬಂಧವಾ ದಲ್ಲ.

ಕೃಷ್ಣ ಯಜುವೇದ ಸಂಹಿತೆ ಗದ್ಯ ಪ ಮಿಶ್ರವಾಗಿದೆ. ಕಠ, ಕಪಿಸ್ಥಲ, ಕಾಲಾಪ ಅಥ ಮೈತ್ರಾಯಣೀಯ ಮತ್ತು ತೈತ್ತರೀಯ ಶಾ ಳಲ್ಲಿ ಉಪಲಬ್ಧವಾಗಿದೆ. ಮೈತ್ರಾಯಣೀಯ ಶಾ ಯಲ್ಲಿ ೫೪ ಪ್ರಪಾಠಕಗಳಿದ್ದು ಕಾಠಕ ಸಂಹಿತೆಗಿಂ ಸ್ವಲ್ಪ ವ್ಯತ್ಯಾಸವಾಗಿದೆ. ತೈತ್ತರೀಯ ಸಂಹಿತೆಯ ೭ ಅಷ್ಟಕ ಅಥವಾ ಕಾಂಡಗಳೂ, ೪೪ ಪ್ರಪಾ ಅಥವಾ ಪ್ರಶ್ನಗಳೂ ಇವೆ. ಒಂದೊಂದು ಪ್ರ ದಲ್ಲಿಯೂ ಅನೇಕ ಅನುವಾಕಗಳಿವೆ. ಈ ಅನು ಕಗಳ ಕೊನೆಯಲ್ಲಿ ಆ ಅನುವಾಕದಲ್ಲಿರುವ ಪ ಸಂಖ್ಯೆಯನ್ನು ಕೊಟ್ಟಿದೆ. ಹೆಚ್ಚಾಗಿ ಗ ಗಳಿಂದ ಕೂಡಿರುವುದರಿಂದ ಇವುಗಳಿಗೆ ಅನು ಮಣಿಗಳಿಲ್ಲ. ಈ ಸಂಹಿತೆಯಲ್ಲಿ ಒಟ್ಟು೬೫ ಅನುವಾಕಗಳು, ೧೧೦೨೯೬ ಪದಗಳೂ ಇ ಶುಕ್ಲ ಯಜುರ್ವೇದದಲ್ಲಿ ಅಧ್ವರ್ಯುವಿಗೆ ಉ ಯುಕ್ತವಾದ ಮಂತ್ರಗಳನ್ನು ಒಟ್ಟುಗೂಡಿಸಿ ಕೃಷ್ಣಯಜುರ್ವೇದದಲ್ಲಿ ಮಂತ್ರಗಳನ್ನು ಅ ಗಳ ವಿನಿಯೋಗವನ್ನು ತಿಳಿಸುವ ಬ್ರಾಹ್ಮಣ ಜೊತೆಯಲ್ಲಿಯೇ ಸೇರಿಸಲಾಗಿದೆ. ಇಲ್ಲಿರ

(33ನೇ ಪುಟ ನೋ

ಕರ್ನಾಟಕವು ಕಾವೇರಿಯಿಂದ ಗೋದಾವರಿಯವರೆಗೂ ಹಬ್ಬಿತ್ತು:

ಈಗ ಮಹಾರಾಷ್ಟ್ರವೆಂದು ಕರೆಯುವ ಬಹು ಭಾಗ ಅತಿ ಸ್ಪಷ್ಟವಾಗಿ ಕರ್ನಾಟಕದ್ದಾಗಿತ್ತು. 'ಮಹಾರಾಷ್ಟ್ರ' ಪದವೇ ಮರಾಠಿಯದಲ್ಲ. 'ಮಹಾನಾಡು' ಎಂಬ ಇದು ವಿಶಾಲ ವ್ಯಾಪ್ತಿಯ ಕನ್ನಡ ನಾಡೇ ಆಗಿತ್ತು. ಎರಡನೆಯ ಪುಲಿಕೇಶಿಯ ಐಹೊಳೆಯ ಶಾಸನದಲ್ಲಿ ಉಕ್ತವಾಗಿರುವ "ಆಗಮತ್ ಅಧಿಪತಿತ್ವಮ್ ಯೋ ಮಹಾರಾಷ್ಟ್ರಕಾಣಾಮ್ ನವನತಿ ಸಹಸ್ರ ಗ್ರಾಮ ಭಾಜಾಮ್ ತ್ರಯಾಣಾಮ್" ಎನ್ನುವಂತೆ ಕರ್ನಾಟಕದಲ್ಲಿ ಬಹುಭಾಗ ಮಹಾರಾಷ್ಟ್ರ ಸೇರಿತ್ತು. ಅಚ್ಚ ಕನ್ನಡಿಗ ಪುಲಿಕೇಶಿ ಬನವಾಸಿ, ಗಂಗ, ಕೊಂಕಣರನ್ನು ಸೋಲಿಸಿ, ಲಾಟ, ಮಾಳವ, ಘೂರ್ಜರನ್ನು ಗೆದ್ದು, ಕೋಸಲದ ಕಳಿಂಗರಾಜ ಹಾಗೂ ಕಾಂಚೀಪುರವನ್ನು ಗೆದ್ದು ಚೋಳ, ಪಾಂಡ್ಯ, ಕೇರಳರನ್ನು ತನ್ನ ಅಂಕೆಯೊಳಗಿಟ್ಟುಕೊಂಡ.

"ತಾರಾತಂತ್ರ" ಎಂಬ ಗ್ರಂಥದಲ್ಲಿ ಮಹಾರಾಷ್ಟ್ರದ ಹೆಸರು ಕರ್ನಾಟಕವೆಂದಿರುವುದು, ಅವೆರಡೂ ಮೂಲತಃ ಒಂದೇ ಆಗಿರುವುದಕ್ಕೆ ನಿದರ್ಶನ.

ಬಾಲಗಂಗಾಧರ ತಿಲಕರೂ "ಮಹಾರಾಷ್ಟ್ರ ಬೇರೆ, ಕರ್ನಾಟಕ ಬೇರೆ ಅಲ್ಲ, ಎರಡರಲ್ಲಿಯೂ ಒಂದೇ ರಕ್ತವು ಹರಿಯುತ್ತದೆ; ಎರಡೂ ದೇಶಗಳ ಭಾಷೆಯೂ ಮುಂಚೆ ಒಂದೇ, ಎಂದರೆ ಕನ್ನಡ–ವಿತ್ತು. ಭಾಷೆಯ ವಿಷಯದಲ್ಲಿ ಮಹಾರಾಷ್ಟ್ರವು ತನ್ನ ಮೊದಲ ಭಾಷೆಯನ್ನು ಬಿಟ್ಟು ಮರಾಠಿಯಾಗಿದೆ" ಎಂದಿದ್ದಾರೆ.

ಕನ್ನಡದ ದೊರೆಯೇ ಆದ ದೇವಗಿರಿಯ ಯಾದವರ ಕೃಷ್ಣನು ಮೊದಲಿಗೆ ಕೆಲವು ಸಣ್ಣ ಶಾಸನಗಳನ್ನು ಕನ್ನಡದಲ್ಲಿ ಹಾಕಿಸಿದನು.

"ಜ್ಞಾನೇಶ್ವರಿ"ಯಲ್ಲಿ ಹೇರಳ ಕನ್ನಡ ಪದಗಳಿವೆ. ಸಂತಜ್ಞಾನೇಶ್ವರನು ತನ್ನ ಅಭಂಗಗಳಲ್ಲಿ "ಕಾನಡಾ ಹೋ ವಿಠ್ಠಲು ಕರ್ನಾಟಕು, ಜ್ಞಾನೇ ಮುಝು ಲಾವಿಲೇ ವೇಧಿ" ಎಂದು ವಿಠಲನನ್ನು ಸ್ತುತಿಸಿದ್ದಾನೆ.

ಮಹಾರಾಷ್ಟ್ರದ ನಾಸಿಕ್, ರಾಷ್ಟ್ರಕೂಟರ ಮುಖ್ಯ ಪಟ್ಟಣವಾಗಿತ್ತು. ವಿಶ್ವವಿಖ್ಯಾತ ಕಲಾಕೃತಿ ಎಲ್ಲೋರದ ಕೈಲಾಸ ದೇವಸ್ಥಾನ ಕಟ್ಟಿಸಿದವನು ರಾಷ್ಟ್ರಕೂಟರ ಒಂದನೆಯ ಕೃಷ್ಣ.

ಕೊಲ್ಹಾಪುರ–ಶಿರೋಳಗಳಲ್ಲಂತೂ ಇಂದಿಗೂ ಕನ್ನಡವೇ ಪ್ರಧಾನ. ಮಹಾಲಕ್ಷ್ಮಿ ದೇವಾಲಯದ ಹತ್ತಾರು ಶಾಸನಗಳು ಕನ್ನಡದಲ್ಲೇ ಇವೆ. ಸಾಂಗಲಿ, ಕೊಲ್ಹಾಪುರದ ಹಿರಿಯರ ಮನೆಗಳಲ್ಲೆಲ್ಲಾ ಪ್ರಾಚೀನ ಕನ್ನಡ ಗ್ರಂಥಗಳು ದೊರೆಯುತ್ತವೆ. ಕನ್ನಡ ವಚನ ಸಾಹಿತ್ಯದ ಸುಪ್ರಸಿದ್ಧ ಕರ್ಮಯೋಗಿ ಸಿದ್ಧರಾಮನ ಸೊಲ್ಲಾಪುರ ಕನ್ನಡದ್ದು. ಕರ್ನಾಟಕ ಸಂಗೀತದ ಪಿತಾಮಹ ಪುರಂದರ ದಾಸರು ಪುಣೆಯ ಹತ್ತಿರದ ಪುರಂದರ ಗಡದವರು.

ಮಹಾರಾಷ್ಟ್ರದ ಸುಮಾರು ಅರ್ಧದಷ್ಟು ಊರುಗಳು ಕನ್ನಡದ ಹೆಸರಿನವೆಂದು, ಪ್ರಸಿದ್ಧ ಮಹಾರಾಷ್ಟ್ರ ಇತಿಹಾಸ ಸಂಶೋಧನೆಕಾರರಾದ ಶ್ರೀ ರಾಜವಾಡೆಯವರೇ ಒಪ್ಪಿಕೊಂಡಿದ್ದಾರೆ. ಉದಾ: ಕಲ್ಲಮಠ, ಪೇಪರಕೊಪ್ಪ, ಮೊಸಳೆ, ನೇರೂರು, ದೇವೂರು, ಗಾಣಗಾಪುರ, ಕಳಸ–ಇತ್ಯಾದಿ.

ಮಹಾರಾಷ್ಟ್ರದಲ್ಲಿ "ಕನ್ನಡ" ಎಂಬ ಹೆಸರಿನ ಒಂದು ತಾಲ್ಲೂಕೇ ಇದೆ. ಇಲ್ಲಿಯೇ ಲೋಕ ಪ್ರಸಿದ್ಧ ವೇರೂಳದ ಕೈಲಾಸ ದೇವಾಲಯವಿರುವುದು.

ಕೊಂಕಣದವರ ಸ್ವತ್ವವನ್ನು ನೋಡಿ ಸಂತೋಷಿಸಿದ ಉಲ್ಲೇಖವೂ ಇದೆ. ಕ್ರಿ. ಶ. 1937ರಲ್ಲಿ ಪ್ರಕಟವಾಗುತ್ತಿದ್ದ "ರಾಕ್ಣೋ" ಎಂಬ ಕೊಂಕಣ ಭಾಷೆಯ ಆದರೆ ಕನ್ನಡ ಲಿಪಿಯ ಪತ್ರಿಕೆ, ಕನ್ನಡ ಹಾಗೂ ಕೊಂಕಣಿಯ ಸಾಮೀಪ್ಯಕ್ಕೆ ನಿದರ್ಶನವಾಗಿದೆ. ಕೊಂಕಣಿ ಭಾಷೆಯಲ್ಲಿ ವಿಪುಲವಾಗಿ ಕನ್ನಡ ಪದಗಳು ತುಂಬಿವೆ. ವ್ಯಾಕರಣಾದಿಗಳಲ್ಲಿ ಕನ್ನಡದ ಕನ್ನಡದ ಪ್ರಭಾವವಿದೆ. ಕೊಂಕಣದವರು ಉಪಯೋಗಿಸುವ ಬಹುಪಾಲು ಗಾದೆಗಳ ಕನ್ನಡದವೇ ಆಗಿವೆ. ಕೊಂಕಣಿ ಕೋಶಕ್ಕೆ ಸೇರಿರುವ ನಿತ್ಯೋಪಯೋಗಿ ಶಬ್ದಗಳು ಕನ್ನಡದವೇ ಆಗಿವೆ. ಮುಖ್ಯವಾಗಿ ಕೊಂಕಣ ಭಾಷೆಯ ಮೂಲ ಕನ್ನಡವೇ ಆಗಿದೆ ಎಂದು ಹೇಳಲಾಗಿದೆ. ಶಬ್ದಗಳನ್ನು ಸ್ವರಾಂತಗಳನ್ನಾಗಿ ಬರೆಯುವಲ್ಲಿ ಕೊಂಕಣದವರು ಮರಾಠಿಯ ಬದಲಾಗಿ ಕನ್ನಡದ ಎ, ಒ, ಸ್ವರಗಳನ್ನು ಉಪಯೋಗಿಸುತ್ತಾರೆ. ಹೀಗೆ ಐತಿಹಾಸಿಕವಾಗಿ ಅತಿ ಪ್ರಾಚೀನಕಾಲದಿಂದಲೂ ಕೊಂಕಣದ ಮೇಲಿನ ಕನ್ನಡದ ಪ್ರಭಾವವನ್ನು ಗುರುತಿಸಬಹುದಾಗಿದೆ.

# ಪ್ರಭಾವೀ ಕರ್ನಾಟಕ

ಚಾಮರಸನ ಪ್ರಸಿದ್ಧ ಗ್ರಂಥ "ಪ್ರಭುಲಿಂಗ ಲೀಲೆ" ಬ್ರಹ್ಮರಸ ಎಂಬುವನಿಂದ ಹಿಂದೆಯೇ ಮರಾಠಿಗೆ ಅನುವಾದಿಸಲ್ಪಟ್ಟಿದೆ. ಚಂದ್ರಾತ್ಮಜ ರುದ್ರನು ಕುಮಾರವ್ಯಾಸನ "ಕರ್ನಾಟಕ ಭಾರತ ಕಥಾ ಮಂಜರಿ"ಯನ್ನು ಮರಾಠಿಗೆ ಭಾಷಾಂತರಿಸಿದ್ದಾನೆ.

ಹೊಯ್ಸಳ ಸಾಮ್ರಾಜ್ಯ ಕರ್ನಾಟಕದ ಇತಿಹಾಸದಲ್ಲಿ ಸುವರ್ಣಯುಗವೊಂದನ್ನು ಸೃಷ್ಟಿಸಿದ ಕೀರ್ತಿಗೆ ಭಾಜನವಾಗಿದೆ. ಧರ್ಮ, ಶಿಲ್ಪ, ಸಂಗೀತ, ಸಾಹಿತ್ಯಗಳು ಆ ರಾಜರ ಆಶ್ರಯದಲ್ಲಿ ಪ್ರವರ್ಧಮಾನಕ್ಕೆ ಬಂದಿದ್ದವು. ಈ ಕಾರ್ಯದಲ್ಲಿ ಹಲವಾರು ಸಾಮಂತ ರಾಜರು ಬೆಂಬಲಿಸಿದ್ದು, ಇವರಲ್ಲಿ ಕೊಂಕಣದವರು ಮೊದಲಿಗರು. ಇವರ ಪ್ರಥಮ ಚಾರಿತ್ರಿಕ ಪುರುಷ ಸನಪುಲ್ಲ. (ಕಿ. ಶ. 783). ಇವರಲ್ಲಿ ಕೊನೆಯ ಅರಸನಾದ ಇರಿವಬೆಡಂಗ ಕನ್ನಡದ ಮಹಾಕವಿ ರನ್ನನಿಗೆ ಆಶ್ರಯದಾತನಾಗಿದ್ದ. ಆ ಕಾಲದಲ್ಲಿ ಇವರ ರಾಜ್ಯ ಮುಂಬಯಿಯವರೆಗೂ ಹರಡಿತ್ತೆಂದು ತಿಳಿದುಬರುತ್ತದೆ. ಕ್ರಿ. ಶ. ಎರಡನೆ ಶತಮಾನದ ತಮಿಳು "ಶಿಲಪ್ಪದಿಗಾರಮ್"ನಲ್ಲಿ ಚೇರ ರಾಜ ಶೆಂಗುಟ್ಟುವನ್ ಎಂಬುವವನು ಕರ್ನಾಟಕ ಮತ್ತು

ಸುಮಾರು ಐದು ಶತಮಾನಗಳಿಗೂ ಮೇಲ್ಪಟ್ಟ ದೀರ್ಘಕಾಲವಾದ ಗುಜರಾತ್ ನಾಡು ಕರ್ನಾಟಕದ ಧೀರೋದಾತ್ತ ರಾಜರುಗಳ ಆಳ್ವಿಕೆಯಲ್ಲಿತ್ತೆಂಬುದನ್ನು ಗಮನಿಸಿದಾಗ ಇಂದಿನ ಕರ್ನಾಟಕದ ಸ್ಥಿತಿಗೆ ಕಣ್ಣು ಹನಿಗೂಡದಿರದು. ಹರಪ್ಪ, ಮೊಹೆಂಜೋದಾರೋದಂತಹ ಪರಮೋತ್ಕೃಷ್ಟ ಸಂಸ್ಕೃತಿಯಲ್ಲಿ ಕನ್ನಡಿಗರ ಕೈವಾಡವಿತ್ತೆಂಬುದೂ, ಕುಮಾರಿಲಭಟ್ಟನು ಮರಾಠಿ ಮತ್ತು ಗುಜರಾತಿಯ ಜತೆ ಕನ್ನಡವನ್ನೂ ಸೇರಿಸಿ ಪಂಚದ್ರಾವಿಡ ಭಾಷೆಯೆಂದು ಕರೆದಿರುವುದೂ ಈ ವಿಷಯದಲ್ಲಿ ಸಾಕಷ್ಟು ಬೆಳಕನ್ನು ಚೆಲ್ಲುತ್ತದೆ. ಕರ್ನಾಟಕದ ರಾಜರ ಮಹಾ ಸಾಮಂತರಲ್ಲೊಬ್ಬನಾದ ಗೋವೆಯ ಕದಂಬರ ಒಂದನೆಯ ಜಯಕೇಶಿ ತನ್ನ ಮಗಳಾದ ಮಯಣಲ್ಲ ದೇವಿಯನ್ನು ಗುಜರಾತಿನ ದೊರೆ ಒಂದನೆಯ ಕರ್ಣನಿಗೆ ಮದುವೆ ಮಾಡಿಕೊಟ್ಟಿದ್ದ. ಕರ್ನಾಟಕದ ಇತಿಹಾಸದಲ್ಲಿ ಅದ್ವಿತೀಯ ಕೀರ್ತಿ ಸಂಪಾದಿಸಿದ ಎರಡನೇ ಪುಲಿಕೇಶಿ (610–649) ಉತ್ತರಾಪಥದ ಮಹಾಚಕ್ರವರ್ತಿ ಹರ್ಷನನ್ನು

ಶ್ರೀ ಆದ್ಯ ರಾಮಾಚಾರ್ಯ

ಸೋಲಿಸಿ ಧವಳಧೀರನೆನಿಸಿ. ನಂತರ ರಾಷ್ಟ್ರಕೂಟರ ಮೂರನೆಯ ಕೃಷ್ಣನ ಒಂದು ಕನ್ನಡ ಶಾಸನವು ಉತ್ತರದ 'ಜೂರಾ' ಎಂಬಲ್ಲಿ ದೊರೆತಿದೆ. ಬರೋಡ ಮತ್ತು ನವಸಾರಿಗಳಲ್ಲಿ ದೊರೆತಿರುವ ತಾಮ್ರಪಟಗಳಲ್ಲಿ ಕರ್ನಾಟಕ ರಾಜರ ಸಹಿ ಇದೆ. 2ನೇ ಧ್ರುವರಾಜನ ಬರೋಡದ ಶಾಸನಗಳಲ್ಲಿ 'ಪೂಸಿಲಾವಳ್ಳಿ' ಮತ್ತು 'ವಿನಹುಚವಳ್ಳಿ' ಎಂಬ ಕನ್ನಡದ ಹೆಸರುಗಳಿವೆ. ಹೀಗೆಯೇ ಗುಜರಾತಿನ ಪ್ರಸಿದ್ಧ ರಾಜ ಜಯಸಿಂಹನ ಮಗನೊಬ್ಬನ ಹೆಸರು 'ಮಂಗಲರಸ' ಎಂದಿದೆ. ಪ್ರಾಚೀನ ಗುಜರಾತಿನ ಕೆಲವು ಬ್ರಾಹ್ಮಣರ ಹೆಸರು ಶುದ್ಧ ಕನ್ನಡದವಾಗಿರುವುದೂ ಗಮನಾರ್ಹ. (ಉದಾ: ರಾಶಾಪಭಟ್ಟ, ಸಿದ್ಧಪಭಟ್ಟ, ನಾಗಮಾರ್ಯ...) ಡಾ॥ ಸಾಲತೊರೆಯವರು ಎರಡನೇ ಪುಲಿಕೇಶಿ ಹರ್ಷನನು ಸೋಲಿಸುವ ಮುನ್ನ ಆಳುತ್ತಿದ್ದ ರಾಜರು ಕನ್ನಡಿಗರೆಂದೂ, ಆಗಿನ "ಬೋರಿವ್ಲಿ", "ಕಂಡಿವ್ಲಿ", "ಲೋಣವಳಾ" ಇತ್ಯಾದಿ ಊರುಗಳು "ಬೋರಪಳ್ಳಿ", "ಕಂಡ-ಪಳ್ಳಿ" ಮತ್ತು "ಲೋಣಪಳ್ಳಿ"ಗಳಾಗಿದ್ದವೆಂದೂ ಅಭಿಪ್ರಾಯಪಟ್ಟಿದ್ದಾರೆ. ಇಷ್ಟು ಮಾತ್ರವೇ ಅಲ್ಲದೆ ಸುಮಾರು 240 ವರ್ಷಗಳವರೆಗೆ ಈ ಪ್ರಾಂತ ರಾಷ್ಟ್ರಕೂಟ ರಾಜರುಗಳ ಆಳ್ವಿಕೆಯಲ್ಲಿತ್ತೆಂದೂ ಹೇಳಲಾಗಿದೆ.

ಧಾರ್ಮಿಕ ರಂಗದಲ್ಲಿ ನೋಡಿದಾಗ ಜೈನ ಧರ್ಮ ಇಂದಿಗೂ ಉಚ್ಛ್ರಾಯ ಸ್ಥಿತಿಯಲ್ಲಿರುವುದು ಕರ್ನಾಟಕ ಮತ್ತು ಗುಜರಾತ್‌ಗಳಲ್ಲಿಯೆ ಎಂಬುದನ್ನು ಗಮನಿಸಬಹುದು. ಇಂದಿನ ಕರ್ನಾಟಕದ 'ಜಟ್ಟಿ' ಮನೆತನದವರು ಗುಜರಾತಿನಿಂದ ಬಂದವರೆಂದು ಹೇಳುತ್ತಾರೆ.

ಗುಜರಾತಿನ ಜಾನಪದ ಗೀತೆಗಳಲ್ಲಿ 'ಯಶಮಾ-ಒಡ್ಡಣಿ' (ಜಸಮಾ-ಓಡಣಿ) ಎಂಬುವಳನ್ನು ಚಾಲುಕ್ಯರ ಸಿದ್ಧರಾಜಜಯಸಿಂಹನು (ಸಧರಾಜೇಸಂಗ) ಪ್ರೇಮಿಸಿದ ಕಥೆ ಬರುತ್ತದೆ. ಇವೆರಡೂ ಹೆಸರು ಕನ್ನಡದವೇ ಆಗಿವೆ.

ಸಂಸ್ಕೃತದ 'ಲ'ಕಾರ ಕನ್ನಡದಲ್ಲಿ 'ಳ'ಕಾರವಾಗುವುದು ಸಾಧಾರಣ. ಇದು ಸಂಸ್ಕೃತ ಜನ್ಯವಾದ ಬೇರಾವ ಭಾಷೆಯಲ್ಲೂ (ಮರಾಠಿ ಬಿಟ್ಟು) ಕಾಣಬರದು. ಆದರೆ ಗುಜರಾತಿಯಲ್ಲಿ ಸಹ ಈ ಬದಲಾವಣೆಯನ್ನು ಗುರುತಿಸಬಹುದು. ಇದರಿಂದ ಕನ್ನಡದ ಪ್ರಭಾವವನ್ನು ಗುರುತಿಸಬಹುದು.

ಇಂದು ತನ್ನ ಸಾಹಿತ್ಯ ಮತ್ತು ಕಲೆಗಳ ಮುಖಾಂತರ ವಿಶ್ವವಿಖ್ಯಾತವಾಗಿರುವ ಬಂಗಾಳಕ್ಕೂ ಕನ್ನಡಕ್ಕೂ ಒಂದು ಸಹಸ್ರ ವರ್ಷಗಳ ಹಿಂದಿನಿಂದಲೂ ವ್ಯವಹಾರ ಸಂಬಂಧ ಮಾತ್ರವಲ್ಲದೆ ಸಾಂಸ್ಕೃತಿಕ ಹಾಗೂ ರಕ್ತ ಸಂಬಂಧವೂ ಇದೆ.

ಕ್ರಿ. ಶ. 8ನೆಯ ಶತಮಾನದ ಕರ್ನಾಟಕ, ಇತಿಹಾಸದ ರೋಮಾಂಚಕಾರಕ ಮಹೋನ್ನತಿಯ ಕಾಲ. ತನ್ನದೇ ಆದ ಸಂಸ್ಕೃತಿಯ, ಭಾಷೆಯ ಸುಗ್ಗಿಯ ಪರ್ವಕಾಲ. ಸಾಹಿತ್ಯ ಶಿಲ್ಪಕಲಾ ಪೋಷಕರಾಗಿ, ಸ್ವತಃ ಕವಿಗಳಾಗಿ, ಧರ್ಮಾನುರಾಗಿಗಳಾಗಿ, ಪ್ರಜಾರಂಜಕರಾಗಿ ರಾಷ್ಟ್ರಕೂಟರು ಬಾಳುತ್ತಿದ್ದ ಭವ್ಯ ಯುಗವದು. ಆ ಕಾಲದಲ್ಲಿಯೇ ಕನ್ನಡದ ಸೇನ ಮನೆತನದವರು ವಂಗದೇಶದಲ್ಲಿ ನೆಲೆಸಿ ರಾಜ್ಯವಾಳಿದರು. ತಾವು ಕರ್ನಾಟಕ ಕ್ಷತ್ರಿಯರೆಂದು ಈಗಲೂ ಅವರು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ತಮ್ಮ ಮೂಲ ಪುರುಷ ಬ್ರಹ್ಮ ಕ್ಷತ್ರಿಯ ವಂಶಕ್ಕೆ ಸೇರಿದ ವೀರಸೇನನ ವಂಶಸ್ಥನಾದ ಸಾಮಂತಸೇನನೆಂದೂ ಅವರು ಹೇಳುತ್ತಾರೆ. ರಾಷ್ಟ್ರಕೂಟರ ಎರಡನೆ ಕೃಷ್ಣನ ಮುಳಗುಂದ (ಕ್ರಿ. ಶ. 602-3) ಶಾಸನದಲ್ಲಿ ಈ ಸೇನರ ಪ್ರಸ್ತಾಪ ಬರುತ್ತದೆ.

ಕರ್ನಾಟಕ ಕ್ಷತ್ರಿಯಾನಾಮ್ ಅಜನಿಕುಲ ಶಿರೋದಾಮಃ ಸಾಮಂತಸೇನಃ- ಎಂಬ ಸ್ಪಷ್ಟವಾದ ಉಲ್ಲೇಖವನ್ನು ಲಕ್ಷ್ಮಣಸೇನನ ಮಧ್ಯನಗರ ಶಾಸನದಲ್ಲಿ ಕಾಣಬಹುದು. ಪೂರ್ವಬಂಗಾಳದ ಬಾರ್ ಭೂಇಜ್ಯ ರಾಜರೂ ಸಹ ಕರ್ನಾಟಕದವರೇ ಆಗಿರುತ್ತಾರೆ. ನೇಪಾಳದ ರಾಜಕುಟುಂಬದ ನಾನ್ಯದೇವನು ಕರ್ನಾಟಕ ಮೂಲದವನು ಎಂದರೆ ಕರ್ನಾಟಕದ ಪ್ರಭಾವವನ್ನು ಊಹಿಸಬಹುದು. ರಾಷ್ಟ್ರಕೂಟ ಅರಸು ಮೂರನೇ ಗೋವಿಂದನ ಸಂಬಂಧಿಯಾಗಿದ್ದ ರಣ್ಣಾದೇವಿಯನ್ನು ಬಂಗಾಲದ ಧರ್ಮಪಾಲ

# ಕಪಿಲೇಶ್ವರಸ್ವಾಮಿ ದೇವಾಲಯ

## ತಿರುಪತಿ

ತಿರುಪತಿಯಿಂದ ತಿರುಮಲೆಗೆ ಹೊರಡುವ ಹಾದಿಯಲ್ಲಿ ತಿರುಪತಿಯ ಉತ್ತರ ಭಾಗದಲ್ಲಿ ಬೆಟ್ಟದ ತಪ್ಪಲಿನಲ್ಲಿರುವ ಸುಂದರ ಪ್ರಶಾಂತ ದೇವಾಲಯ. ಇಲ್ಲಿನ ದೊಡ್ಡ ಜಲಪಾತ ಮಳೆಗಾಲದಲ್ಲಿ ತುಂಬಿ ಧುಮುಕುವುದು. ಆಳ್ವಾರ್ ತೀರ್ಥವೆಂದೂ ಹೆಸರಿರುವ ಇಲ್ಲಿ ಕಪಿಲ ಮಹರ್ಷಿ ಪೂಜಿಸಿದ ಈಶ್ವರ ಲಿಂಗವಿದ್ದು ಸಕಲ ಹಿಂದೂಗಳನ್ನೂ ಏಕತ್ರ ಆಕರ್ಷಿಸುತ್ತದೆ. ತಿರುಪತಿಯಿಂದ ನಡೆದೂ ಹೋಗಬಹುದು. ಸ್ಥಳೀಯ ವಾಹನ ಸೌಕರ್ಯವೂ ಉಂಟು.

## ಆಲಯ ಕಾರ್ಯಕ್ರಮ ವಿವರ

| | |
|---|---|
| ಸುಪ್ರಭಾತ | ಬೆಳಗ್ಗೆ 5-00 ರಿಂದ 5-30 ವರೆಗೆ |
| ಸರ್ವದರ್ಶನ | ,, 5-30 ರಿಂದ 9-30 ವರೆಗೆ |
| ಅಭಿಷೇಕ | ,, 9-30 ರಿಂದ 10-30 ವರೆಗೆ |
| ಮೊದಲ ಬಲಿ, ಘಂಟೆ | ,, 10-30 ರಿಂದ 10-45 ವರೆಗೆ |
| ಸರ್ವದರ್ಶನ | ,, 10-45 ರಿಂದ 11-30 ವರೆಗೆ |
| ಎರಡನೇ ಬಲಿ, ಘಂಟೆ | ,, 11-30 ರಿಂದ 11-45 ವರೆಗೆ |
| ಸರ್ವದರ್ಶನ | 11-45 ರಿಂದ ಮಧ್ಯಾಹ್ನ 4-00 ವರೆಗೆ |
| ಅಭಿಷೇಕ (ಆರ್ಜಿತ) | ಮಧ್ಯಾಹ್ನ 4-00 ರಿಂದ 4-30 ವರೆಗೆ |
| ಅರ್ಚನೆ (ಆರ್ಜಿತ) | ,, 4-30 ರಿಂದ 5-30 ವರೆಗೆ |
| ರಾತ್ರಿ ಘಂಟೆ | ಸಂಜೆ 5-30 ರಿಂದ 5-45 ವರೆಗೆ |
| ಸರ್ವದರ್ಶನ | ,, 5-45 ರಿಂದ 6-00 ವರೆಗೆ |
| ದೀಪಾರಾಧನೆ | ,, 6-00 ರಿಂದ 6-30 ವರೆಗೆ |
| ಸರ್ವದರ್ಶನ | ,, 6-30 ರಿಂದ 7-30 ವರೆಗೆ |
| ಏಕಾಂತಸೇವೆ | ರಾತ್ರಿ 7-30 ರಿಂದ 8-00 ವರೆಗೆ |

ಆರ್ಜಿತಸೇವಾಕಾಲದಲ್ಲಿ ರೂ॥ 1-00 ಶುಲ್ಕದಿಂದ ಒಬ್ಬರು ದರ್ಶನಕ್ಕೆ ಅನುಮತಿಸಲ್ಪಡುವರು.

**ಪೇಷ್ಕಾರ್.**

ಮದುವೆಯಾಗಿದ್ದ. ಹೀಗೆ ರಾಜಕೀಯ ಪ್ರಭಾವ ಮಾತ್ರವಲ್ಲದೆ ಧಾರ್ಮಿಕವಾಗಿಯೂ ಬಂಗಾಲದವರು ಕನ್ನಡಿಗರಿಂದ ಉಪಕೃತರಾಗಿದ್ದಾರೆ. ಜೈನ, ವೈಷ್ಣವ, ಬೌದ್ಧ, ವೀರಶೈವ ಮತಗಳು ಏಳಿಗೆ ಪಡೆದದ್ದು ಇಲ್ಲಿಯೇ. ಭಕ್ತಿಮೇರು ಶ್ರೀ ಮಧ್ವಾಚಾರ್ಯರ ಭಕ್ತಿ ಮಾರ್ಗ ಬಂಗಾಲದ ಚೈತನ್ಯ ಪಂಥಕ್ಕೆ ಸ್ಫೂರ್ತಿಯಾಯಿತು. ಮಧ್ವಾಚಾರ್ಯರೇ ಧರ್ಮ ಪ್ರಚಾರಕ್ಕಾಗಿ ಬಂಗಾಲಕ್ಕೆ ಹೋದಾಗ ಇವರ ತೇಜೋಪ್ರಭಾವದಿಂದ ಕರ್ನಾಟಕ-ಬಂಗಾಲಗಳ ನಡುವೆ ಭಕ್ತಿಯ ಸೇತುವೊಂದು ನಿರ್ಮಿತವಾಗಿ ಅಲ್ಲಿಂದಿಲ್ಲಿಗೆ, ಇಲ್ಲಿಂದಲ್ಲಿಗೆ ಭಕ್ತ ಶಿರೋಮಣಿಗಳ ಸಂಚಾರವಾಗಿ ದೈವಭಕ್ತಿಯ ಪ್ರಚಂಡ ಪ್ರವಾಹವೇ ಹರಿಯಿತು. ಬಂಗಾಲದ ಸಂತಶ್ರೇಷ್ಠ ಚೈತನ್ಯದೇವರೂ, ನಿತ್ಯಾನಂದರೂ ವಿಜಯನಗರವನ್ನು ಸಂದರ್ಶಿಸಿದರು. ನಮ್ಮಲ್ಲಿ ಮದುವೆಯಾದ ಹೊಸದಂಪತಿಗಳು ಮನೆಗೆ ಬಂದಾಗ ವರನ ಅಕ್ಕ ಅಥವಾ ತಂಗಿ ಬಾಗಿಲು ತಡೆಯುವ ಪದ್ಧತಿ ಉತ್ತರ ಭಾರತದಲ್ಲಿ ಬಂಗಾಳ ಬಿಟ್ಟರೆ ಬೇರಲ್ಲೂ ಕಾಣಬರದು. ಬಂಗಾಲಿ ಶಬ್ದಕೋಶಗಳಲ್ಲಿ ನೀರ್—ನಾರಿಕೇಳ, ಕೋಯ, ಮಾಲೆ, ಮಲ್ಲಿ, ಮೀನ, ಉಡುತ್ತು (ಉಡುಪು) ಇತ್ಯಾದಿ ಕನ್ನಡ ಪದಗಳನ್ನು ಕಾಣಬಹುದು.

ಕರ್ನಾಟಕ ಮತ್ತು ತಮಿಳು ನಾಡುಗಳೆರಡೂ ಒಂದೇ (ದ್ರಾವಿಡ) ಪಂಗಡಕ್ಕೆ ಸೇರಿದ ಪ್ರದೇಶಗಳಾಗಿದ್ದು ಭಾಷೆ ಹಾಗೂ ಸಂಸ್ಕೃತಿಗಳಲ್ಲಿ ಅತ್ಯಂತ ನಿಕಟ ಸಂಪರ್ಕವಿದೆ. ಕರ್ನಾಟಕದ ಉಲ್ಲೇಖ ತಮಿಳಿನ ಅತ್ಯಂತ ಪ್ರಾಚೀನ ಸಾಹಿತ್ಯದಲ್ಲೆಲ್ಲಾ ದೊರೆಯುತ್ತದೆ. ‘ಶಿಲಪ್ಪದಿಗಾರಮ್’ನಲ್ಲಿ ಚೇರರಾಜನು ಕರ್ನಾಟಕದ ನೃತ್ಯ ನೋಡಿದ ಸಂಗತಿ ಬರುತ್ತದೆ. ಹೀಗೆಯೇ ‘ಅಹನಾನೂರು’ ಕೃತಿಯಲ್ಲೂ ಸಹ ಎರುಮೈ ನಾಡಿನ ಉಲ್ಲೇಖವಿದೆ. ಕ್ರಿ. ಶ. 9ನೇ ಶತಮಾನದ ತಮಿಳ ಸಂಘದ ಜೈನಕವಿ ತಿರುತಕ್ಕದೇವನು ರಚಿಸಿದ ಜೀವಕ ಚಿಂತಾಮಣಿಯಲ್ಲಿ ಕನ್ನಡ ಪದಗಳಿವೆ. 15ನೇ ಶತಮಾನದ ಚಾಮರಸನು ಬರೆದ ಪ್ರಭುಲಿಂಗಲೀಲೆಯನ್ನು ತಿರುವಣ್ಣಾಮಲೆಯ ಶಿವಪ್ರಕಾಶಸ್ವಾಮಿಗಳು ತಮಿಳಿಗೆ ಭಾಷಾಂತರಿಸಿದ್ದಾರೆ. ಕರ್ನಾಟಕ ಸಂಗೀತದ ಆಚಾರ್ಯಪುರುಷರಾದ ಪುರಂದರದಾಸರಿಂದ ತ್ಯಾಗರಾಜರು ಪ್ರಭಾವಿತರಾದುದು ಸರ್ವವಿದಿತ. ಚೂಡಾಮಣಿ ಮತ್ತು ಚಿಂತಾಮಣಿ ಎಂಬ ತಮಿಳು ಗ್ರಂಥಗಳು ಅದೇ ಹೆಸರಿನ ಕನ್ನಡ ಕೃತಿಗಳ ಪ್ರತಿಬಿಂಬವಾಗಿ ಕಾಣುತ್ತವೆ. ಹೀಗೆ ಕನ್ನಡದ ಛಂದೋಗ್ರಂಥ ‘ಗುಣಗಾಂಕಿಯಂ’ ಅನೇಕ ತಮಿಳು ಲಾಕ್ಷಣಿಕರ ಆಧಾರ ಗ್ರಂಥವಾಯಿತು.

ಸಾಹಿತ್ಯಕವಾಗಿ ಹಾಗೂ ರಾಜಕವಾಗಿ ಕರ್ನಾಟಕ ತೆಲುಗಿನ ಮೇಲೆ ಅಪಾರ ವರ್ಚಸ್ಸನ್ನು ಬೀರಿದೆ. ತೆಲುಗಿನ ಆದಿಕವಿ ನನ್ನಯ ಭಟ್ಟ (ಕ್ರಿ. ಶ. 1080)ನ ಬಗ್ಗೆ ಶ್ರೀ ಸಿ ಆರ್. ರೆಡ್ಡಿಯವರು ಬರೆಯುತ್ತಾ “ತೆಲುಗು ನಾಡಿನ ಜನದ ಮೇಲೆ ಕನ್ನಡದ ಜೈನ ಭಾರತಗಳನ್ನು ಓದಿ ಆದ ಪರಿಣಾಮಗಳನ್ನು ನಿರ್ನಾಮ ಮಾಡುವ ಸಲುವಾಗಿ ನನ್ನಯಭಟ್ಟನು ಆಂಧ್ರಭಾಷೆಯಲ್ಲಿ ವೈದಿಕ ಮಾರ್ಗಾನುವರ್ತಿಯಾದ ಭಾರತ ಬರೆದ” ಎಂದಿದ್ದಾರೆ. ಅಂದರೆ ಇವನ ಭಾರತಕ್ಕೆ ಕನ್ನಡದ ಕವಿಕುಲತಿಲಕ ಪಂಪನ ಭಾರತವೇ ಸ್ಫೂರ್ತಿಯಾಗಿದೆ ಎಂದು ವಿದಿತವಾಗುತ್ತದೆ.

ಹಳೆಯ ತೆಲುಗು ಶಾಸನಗಳಲ್ಲಿ ತೆಲುಗು ರಾಜರಿಗೂ, ಕನ್ನಡದ ಬಿರುದುಗಳಿದ್ದುದು ಗೋಚರಿಸುತ್ತದೆ. 9ನೇ ಶತಮಾನದ ಶಾಸನದಲ್ಲಿ ಸೇನಾಪತಿಯೊಬ್ಬನಿಗೆ ‘ಮನುಜರ ದೇವ’, ‘ಜಗದೇಭ ಗಂಡ’ ಬಿರುದು ಕೊಟ್ಟ ಉಲ್ಲೇಖವಿದೆ. ಹಲವಾರು ಧೀಮಂತ ಕವಿಗಳು ಕರ್ನಾಟಕಕ್ಕೆ ಬಂದು ನೆಲೆಸಿ ಕನ್ನಡ ಕೃತಿ ರಚನೆ ಮಾಡಿದರು. ನನ್ನಯ ಭಟ್ಟನಿಗೆ ಬರೆಯಲು ಪ್ರೋತ್ಸಾಹಿಸಿದವನೂ, ಅವನು ಬರೆದುದನ್ನು ತಿದ್ದಿದವನೂ ಕನ್ನಡದ ಪಂಡಿತ ನಾರಾಯಣ ಭಟ್ಟ. 12ನೇ ಶತಮಾನದ ಪಾಲ್ಕುರಿಕೆ ಸೋಮನಾಥನು ತೆಲುಗು ಬಸವ ಪುರಾಣವನ್ನು ಬರೆದನು. ಕನ್ನಡದ ಪ್ರಭುಲಿಂಗಲೀಲೆಯನ್ನು ಪಿಡುಪರ್ತಿ ಸೋಮನಾಥ, ಪಿಡುಪರ್ತಿ ಬಸವಕವಿ ಎಂಬುವರು ಬೇರೆ ಬೇರೆಯಾಗಿ ತೆಲುಗಿಗೆ ಅನುವಾದಿಸಿದ್ದಾರೆ. ನೃಪತುಂಗನ ‘ಕವಿರಾಜ ಮಾರ್ಗ’ ಭೀಮಕವಿಯ ‘ಕವಿಜನಾಶ್ರಯಮು’, ತೆಲುಗು ಗ್ರಂಥಕ್ಕೆ ಪ್ರಚೋದನೆ ನೀಡಿತು. ನನ್ನಿಚೋಡನ ‘ಕುಮಾರ ಸಂಭವ’ ಹಾಗೂ ಪೆದ್ದಣದ ‘ನೀತಿಸಾರ ಸುಮತಿ ಶತಕ’ಗಳು ಕನ್ನಡ ಕಂದವನ್ನು ಹೋಲುತ್ತವೆ.

ನಂತರ ವಿಜಯನಗರ ಕಾಲದಲ್ಲಿ ತೆಲುಗಿಗೆ ಅಪಾರ ಪ್ರೋತ್ಸಾಹ ದೊರೆಯಿತು. ಖ್ಯಾತ ತೆಲುಗು ಕವಿ ನಾಚನ ಸೋಮನಾಥನಿಗೆ ಬುಕ್ಕರಾಯ ‘ಅಷ್ಟಭಾಷಾ ಕವಿ’ ಎಂಬ ಬಿರುದನ್ನು ದಯಪಾಲಿಸಿದ್ದ.

ವಿಶ್ವವಿಖ್ಯಾತಿ ಪಡೆದ ಕನ್ನಡರಾಜ್ಯರಮಾರಮಣನಾದ ಕೃಷ್ಣದೇವರಾಯನ ಕೊಡುಗೆಯಂತೂ ತೆಲುಗಿಗೆ ಅಪಾರ.

ವಿಜಯನಗರದ ನಂತರ 17, 18ನೇ ಶತಮಾನಗಳಲ್ಲಿ ಮೈಸೂರು ಅರಸರ ಆಸ್ಥಾನದಲ್ಲಿ ತೆಲುಗು ಸಾಹಿತ್ಯಕ್ಕೆ ಪ್ರೋತ್ಸಾಹ ದೊರೆಯಿತು.

ಹೀಗೆ ತೆಲುಗಿನ ಸರ್ವಾಂಗೀಣ ಪ್ರಗತಿಗೆ ಕನ್ನಡ ರಾಜರು ಪ್ರೇರಣೆ ಪ್ರೋತ್ಸಾಹಗಳನ್ನು ನೀಡಿದ್ದಾರೆ.

ಸಂಸ್ಕೃತ ಸಾಹಿತ್ಯ ಭರತಖಂಡದ ಅತಿ ಪ್ರಾಚೀನ ಸಾಹಿತ್ಯ. ವಿಶ್ವವಿಖ್ಯಾತ ಕವಿಗಳಿಂದ ಸರ್ವಾಂಗ ಸಮೃದ್ಧಿಯಾಗಿ ಬೆಳೆದು ಬಂದಿರುವ ಸಾಹಿತ್ಯ. ಎರಡು ಸಹಸ್ರ ವರ್ಷಗಳಿಂದಲೂ ಕನ್ನಡ ನಾಡಿನಲ್ಲಿ ಸಂಸ್ಕೃತ ಗ್ರಂಥ ವ್ಯವಸಾಯ ಸಾಗಿ ಬಂದಿದೆ. ಕರ್ನಾಟಕವನ್ನಾಳಿದ ಎಲ್ಲ ರಾಜರೂ ಸಹ ಸುದೈವವಶಾತ್ ಗೀರ್ವಾಣ ಭಾಷಾಭಿಮಾನಿಗಳೇ ಆಗಿದ್ದರು. ಸಂಸ್ಕೃತ ನಾಟಕ ಜಗತ್ತಿನ ಅಸಮಾನ ಕ್ರಾಂತಿಕಾರಿ ಕವಿ ಭಾಸ ಕರ್ನಾಟಕದವನೇ ಆಗಿರಬೇಕೆಂದು ಪ್ರೊ. ಯು. ವೆಂಕಟಕೃಷ್ಣರಾಯರು ಊಹಿಸುತ್ತಾರೆ. ಅವನ ನಾಟಕದ ಪ್ರಾರ್ಥನಾ ಪದ್ಯಗಳಲ್ಲಿ ಬರುವ ದ್ವಿತೀಯಾಕ್ಷರ ಪ್ರಾಸ ಮತ್ತು ನಾಟಕದ ಸಂಭಾಷಣೆಗಳಲ್ಲಿ ಬರುವ ಕೆಲವು ಕನ್ನಡದ ವಿಶಿಷ್ಟ ಪ್ರಯೋಗಗಳನ್ನು ಅವರು ಆಧಾರವಾಗಿ ಹೇಳುತ್ತಾರೆ. ಕನ್ನಡ ಸಾಹಿತ್ಯದಲ್ಲಿ ಚಿರಸ್ಮರಣೆಗೆ ಪಾತ್ರವಾಗಿರುವ ರಾಷ್ಟ್ರಕೂಟರ ನೃಪತುಂಗ— ‘ಪ್ರಶ್ನೋತ್ತರಮಾಲಾ’ ಎಂಬ ಗ್ರಂಥ ರಚನೆ ಮಾಡಿದ. ಕಲ್ಯಾಣ ಚಾಲುಕ್ಯರ ರಾಜ ಭೂಲೋಕ ಮಲ್ಲನು ಮಾನಸೋಲ್ಲಾಸ — ಎಂಬ ರಾಜನೀತಿ ಗ್ರಂಥದ ಸೃಷ್ಟಿಕರ್ತನಾದನು. ಮೈಸೂರಿನ ಅರಸರಾದ ಚಿಕದೇವರಾಜರು, ಮುಮ್ಮಡಿ ಕೃಷ್ಣರಾಜರೂ ಸಹ ಹಲವಾರು ಗ್ರಂಥಗಳನ್ನು ಸಂಸ್ಕೃತದಲ್ಲಿ ಬರೆದಿದ್ದಾರೆ.

ರಾಮಾನುಜಾಚಾರ್ಯರಾದಿಯಾಗಿ ಅನೇಕ ಸಂತರೂ ವೇದಾಂತ ಗ್ರಂಥಗಳನ್ನು ಬರೆದರು. ವ್ಯಾಸರಾಜರೂ, ವಾದಿರಾಜರೂ ನೂರಾರು ಕೃತಿ ರಚನೆ ಮಾಡಿದ್ದಾರೆ.

ಬುಕ್ಕರಾಯನ ಸೊಸೆಯಾದಿಯಾಗಿ ಅನೇಕ ಮಹಿಳೆಯರೂ ಸಂಸ್ಕೃತದಲ್ಲಿ ಗಣನೀಯ ಸೇವೆ ಸಲ್ಲಿಸಿದ್ದಾರೆ. *

ತಿರುಮಲೆ ತಿರುಪತಿ ದೇವಸ್ಥಾನಗಳು

# ದಾನಯೋಜನೆಯಲ್ಲಿ ಯಾತ್ರಿಕವಸತಿಗೃಹಗಳು

ತಿರುಮಲೆಯಲ್ಲಿ ನಿರಂತರ ಹೆಚ್ಚುತ್ತಿರುವ ಯಾತ್ರಿಕರ ಅನುಕೂಲಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವು ಹೆಚ್ಚಿನ ವಸತಿ ಸೌಕರ್ಯವನ್ನು ಒದಗಿಸಲು ತೀರ್ಮಾನಿಸಿದೆ. ಈ ಬೃಹತ್ ಕಾರ್ಯವನ್ನು ಭಕ್ತರ ಹಾಗೂ ಸೇವಾಕರ್ತರ ಸಕ್ರಿಯ ಸಹಕಾರದಿಂದ ನೆರವೇರಿಸಲು ತಿ.ತಿ.ದೇ. ನಿರ್ಧರಿಸಿದೆ

ಈ ಯೋಜನೆಯ ವಿವರಗಳನ್ನು ಆಸಕ್ತರಿಗಾಗಿ ಈ ಕೆಳಗಿನಂತೆ ನಿರೂಪಿಸಲಾಗಿದೆ.

## ಗರುಡಾದ್ರಿನಗರ ವಸತಿಯೋಜನೆ

ಈ ಯೋಜನೆಯನ್ವಯ ಎರಡು ಅಂತಸ್ತುಗಳ 16 ವಸತಿಗೃಹಗಳನ್ನು (ಪ್ರತಿಯೊಂದು ಅಂತಸ್ತಿನಲ್ಲಿ 4 ಸೂಟ್‌ಗಳಿರುವಂತೆ) ನಿರ್ಮಿಸಲಾಗುವುದು. ಪ್ರತಿಯೊಂದು ಸೂಟ್ ಸಹ 10' × 12' ಗಳಿದ್ದು ಸ್ನಾನ ಶೌಚಾಗಾರಗಳೊಂದಿಗೆ ಹಾಗೂ ಸಾಮಾನ್ಯ ಅಂಗಳದೊಂದಿಗೆ ಕೂಡಿರುವುದು.

ಒಟ್ಟು 320 ಚದರಡಿ ಪ್ಲಿಂತ್ ವಿಸ್ತೀರ್ಣದ ಪ್ರತಿಸೂಟ್‌ಗಾಗಿ ದಾನ ನೀಡಬೇಕಾದ ಮೊಬಲಗು ರೂ 30,000 ಮಾತ್ರ.

ಒಟ್ಟು 128 ಸೂಟ್‌ಗಳಿರುವ ಈ ಯೋಜನೆಯಲ್ಲಿ ಆಸಕ್ತ ಭಕ್ತರು ಈಗಾಗಲೇ 66 ಸೂಟ್‌ಗಳಿಗಾಗಿ ದಾನಗಳನ್ನು ನೀಡಿದ್ದಾರೆ!

8 ಸೂಟ್‌ಗಳ ಒಂದು ವಸತಿಗೃಹದ ವೆಚ್ಚವಾದ 2.4 ಲಕ್ಷ ರೂಗಳನ್ನಾಗಲೀ, 4 ಸೂಟ್‌ಗಳ ವೆಚ್ಚವಾದ 1.2 ಲಕ್ಷ ರೂಗಳನ್ನಾಗಲೀ ಅಥವಾ ಎರಡು ಸೂಟ್‌ಗಳ ವೆಚ್ಚವಾದ ರೂ 60,000 ಗಳನ್ನಾಗಲೀ ನೀವು ದಾನ ನೀಡಬಹುದು.

## ರಾಮಬಗೀಚಾ ಅತಿಥಿಗೃಹ ಯೋಜನೆ

ತಿರುಮಲೆಯ ದೇವಾಲಯದ ಈಶಾನ್ಯ ಭಾಗದಲ್ಲಿನ ರಾಮ ಬಗೀಚಾದಲ್ಲಿ ಮೂರು ಅತಿಥಿ ಗೃಹಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆ.

ಪ್ರತಿಯೊಂದು ಅತಿಥಿಗೃಹವೂ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಅಂತಸ್ತಿನಲ್ಲಿ 50 ಸೂಟ್‌ಗಳಿರುತ್ತವೆ. ಪ್ರತಿಯೊಂದು ಸೂಟ್ 14' × 16' ವಿಸ್ತೀರ್ಣವಿದ್ದು ಸ್ನಾನ ಶೌಚ ಗೃಹಗಳು ಇರುತ್ತವೆ. ಪ್ಲಿಂತ್ ವಿಸ್ತೀರ್ಣ ಸುಮಾರು 600 ಚ. ಅಡಿಗಳಾಗಿದ್ದು ಸಾಮಾನ್ಯ ಅಂಗಳವಿರುವುದು. ಪ್ರತಿ ಸೂಟ್‌ನ ನಿರ್ಮಾಣಕ್ಕೆ ತಗಲುವ ದಾನದ ಮೊಬಲಗು ರೂ 60,000 ಮಾತ್ರ.

ತೀರ್ಮಾನಿಸಲಾದ 450 ಸೂಟ್‌ಗಳಲ್ಲಿ ಈಗಾಗಲೇ 37 ಸೂಟ್‌ಗಳಿಗಾಗಿ ದಾನಗಳನ್ನು ಸ್ವೀಕರಿಸಲಾಗಿದೆ!

## ನಿಮ್ಮ ದಾನದ ಪ್ರತಿಯಾಗಿ ದೊರೆಯುವ ಸೌಲಭ್ಯಗಳು ಈ ರೀತಿ ಇವೆ

1. ದಾನಿಗಳ ಹೆಸರಿನ ಫಲಕವನ್ನು ಕಟ್ಟಡದಲ್ಲಿ ಸ್ಥಾಪಿಸಲಾಗುವುದು
2. ಒಂದು ಬಾರಿಗೆ ಹತ್ತು ದಿನಗಳಿಗೆ ಮೀರದಂತೆ ದಾನಿಯು ಒಂದು ವರ್ಷದಲ್ಲಿ 60 ದಿನಗಳ ಕಾಲ ಉಚಿತವಾಗಿ ತಮ್ಮ ದಾನದ ಕಟ್ಟಡದಲ್ಲಿ ತಂಗಬಹುದು.
3. ದಾನಿಯ ಬಂಧುಗಳಿಗೆ ತಿರುಮಲೆಯಲ್ಲಿ ವಸತಿ ನೀಡುವಲ್ಲಿ ಆದ್ಯತೆ ನೀಡಲಾಗುವುದು.
4. ಅಪೇಕ್ಷಿಸಿದಾಗ ದಾನಿಯ ಕಟ್ಟಡ ಖಾಲಿಯಿಲ್ಲದಲ್ಲಿ ಇತರ ಏರ್ಪಾಡುಗಳನ್ನು ಮಾಡಿಕೊಡಲಾಗುವುದು.

ಕೂಡಲೇ ಬರೆಯಿರಿ — ಕಾರ್ಯನಿರ್ವಹಣಾಧಿಕಾರಿ
ತಿ. ತಿ. ದೇ. ತಿರುಪತಿ

# ಮಣ್ಣಿನಲ್ಲಿ ಮುಕುಂದ

“ವ್ಯಾಪಾರದಲ್ಲಿ ಲಾಭವೇನೊ ಬರಬಹುದು. ಆದರೆ ಈ ಭಯಂಕರ ಸಾಗರದಲ್ಲಿ ಇನ್ನೆಷ್ಟುದಿನ ತೇಲುತ್ತ ಹೋಗಬೇಕೊ ಕಾಣೆ.”

“ಕಷ್ಟಪಡದೆ ಫಲವುಂಟೆ ? ಬಹು ದೊಡ್ಡ ಲಾಭಕ್ಕಾಗಿ ಕಷ್ಟ ಪಡಬೇಕಾದ್ದು ಬಹುದೊಡ್ಡ ಅನಿವಾರ್ಯ.”

“ನಮ್ಮಲ್ಲಿ ಆಹಾರದಾಸ್ತಾನು ಮುಗಿಯುತ್ತ ಬಂದಿವೆ. ಸಿಹಿನೀರಿನ ದಾಸ್ತಾನು ಇನ್ನೆರಡು ಮೂರು ದಿನದಲ್ಲಿ ಮುಗಿದೀತು. ಆ ನಂತರ ಗತಿ ಯೇನು ?”

“ಲಾಭದಾಯಕ ಸಾಮಗ್ರಿಗಳನ್ನು ನೋಡುತ್ತ ಹೋದರೆ ಅನ್ನ, ನೀರು ಇಲ್ಲವೆಂಬ ಸಂಕಟ ನಿವಾರಣೆಯಾಗುತ್ತದೇನು?”

“ಯಾವಾಗಲೂ ಅನ್ನ ನೀರು ಎಂದು ಯೋಚಿಸಿದರೆ ಹೇಗೆ ? ಪ್ರಯಾಣದಲ್ಲಿ ಹೇಗೋ ಹಾಗೆ ಕಾಲ ಹಾಕಬೇಕು.”

“ಹೇಗೋ ಹಾಗೆ–ಎಂದರೇನು ? ಊಟ ತಿಂಡಿ ಬೇಡವೆ ? ನಾವೇ ಬದುಕದೆ ಇದ್ದರೆ ವ್ಯಾಪಾರ ವೇಕೆ ? ಯಾವ ವ್ಯವಹಾರ ತಾನೆ ಏಕೆ ?”

“ಈ ಸಾಗರದ ಮೇಲೆ ನಾವು ಅನೇಕ ಬಾರಿ ಓಡಾಡಿದ್ದೇವೆ. ನೂರಾರು ಪ್ರದೇಶಗಳಿಂದ ಸರಕು ತಂದಿದ್ದೇವೆ. ಸಾವಿರಾರು ರೂಪಾಯಿ ಲಾಭ ಸಂಪಾದಿಸಿದ್ದೇವೆ. ಆದರೆ ಈ ಸಲ ನೀವೇಕೆ ಹೀಗೆ ಗಾಬರಿಪಡುತ್ತಿದ್ದೀರಿ ?”

ಹಾಯಿದೋಣಿಗಳಲ್ಲಿ ಸರಕು ತುಂಬಿಕೊಂಡು ಬರುತ್ತಿರುವ ವ್ಯಾಪಾರಿಗಳು ತಂತಮ್ಮಲ್ಲಿ ಮಾತಾಡಿಕೊಳ್ಳುತ್ತಿದ್ದಾರೆ. ದೋಣಿಗಳಲ್ಲಿ ಮೆಣಸು–ಜೀರಿಗೆ–ಲವಂಗ–ಏಲಕ್ಕಿ ಮುಂತಾದ ವಸ್ತುಗಳು ತುಂಬಿವೆ. ಆದರೆ ಸರಕು ತರುತ್ತಿರುವ ಜನರ ಮನಸ್ಸಿನಲ್ಲಿ ಆತಂಕ, ಭಯ ತುಂಬಿದೆ. ಸಾಗರದಮೇಲೆ ಪಯಣವೆಂದರೆ ಸಾವಿನೊಂದಿಗೆ ಸರಸವಿದ್ದಂತೆ. ಸಾಗರದ ರುದ್ರರಮಣೀಯತೆ, ಸುರುಳಿಸುರುಳಿಯಾಗುರುಳಿ ಬರುವ ತರಂಗಗಳ ಚೆಲ್ಲಾಟ, ಸೂರ್ಯೋದಯ ಹಾಗೂ ಅಸ್ತಮಾನ ಸಮಯದಲ್ಲಿ ಸಮುದ್ರವೈಭವ...... ಇದೆಲ್ಲ ಕಾವ್ಯದಲ್ಲೋದಿ ಸಂತೋಷ ಪಡಬಹುದು. ಆದರೆ ವಾಸ್ತವಿಕತೆ ಬೇರೆ. ಸಾಗರದ ಪ್ರಯಾಣಿಕರಿಗೆ ಮೂರುಬಗೆಯ ಚಿಂತೆ ಕಾಡುತ್ತದೆ–ಆಹಾರ–ಆರೋಗ್ಯ–ನೀರು. ನೀರಿನಮೇಲೆ ತೇಲಿ ಬರುತ್ತಿದ್ದರೂ ನೀರಡಿಕೆಯ ಚಿಂತೆ ತಪ್ಪಿದ್ದಲ್ಲ. ವರುಣದೇವನೇನಾದರೂ ಮುನಿದರೆ ಹಾಯಿ ದೋಣಿಗಳ ಪಾಡೆಲ್ಲ ನಾಯಿಪಾಡಾದೀತು. ಹಸಿವು ತೀರಿಸಲು ಮೀನು ತಿನ್ನಲಾದೀತೆ? ನೀರಡಿಕೆಯೆಂದು ಉಪ್ಪುನೀರು ಕುಡಿಯಲಾದೀತೆ? ಅದೂ ಒಂದೆರಡು ದಿನದ ಪಾಡಲ್ಲ. ಸಾಂಬಾರ ಪದಾರ್ಥಗಳ ವ್ಯಾಪಾರವೆಂದರೆ ಅತ್ಯಧಿಕ ಲಾಭದ ವ್ಯವಹಾರ – ಆದರೆ ಪಡಬೇಕಾದ ಕಷ್ಟವೂ ಅಪಾರ. ಲಾಭಬರುವುದೆಂದು ಲೆಕ್ಕ ಹಾಕಿ ಸಂಭ್ರಮಪಡುತ್ತ, ಕ್ಷಣಕ್ಷಣವೂ ಹಿಂಸೆ ಪಡುವುದು, ಆಶಾವಾದದ ಏಣಿಹತ್ತುತ್ತ ಆಕಾಶಕ್ಕೇರ ಬಯಸುವುದು ಮಾನವನ ಜಾಯಮಾನ; ಅವನ ಸಾಹಸದ ಪ್ರವೃತ್ತಿ. ಜೀವನಯಂತ್ರ ಚಲನೆಗೆ ಆಶಾವಾದವೇ ಇಂಧನ.

ಸಾಗರವೆಂದರೆ ಅನೇಕ ವೈಪರೀತ್ಯಗಳ ತವರು ಮನೆ. ಇದ್ದಕಿದ್ದಂತೆ ಬಿರುಗಾಳಿ – ಇದ್ದಕಿದ್ದಂತೆ ಬಿರುಮಳೆ – ಇದ್ದಕಿದ್ದಂತೆ ರೌದ್ರ, ಇದ್ದಕಿದ್ದಂತೆ ಶಾಂತ. ಯಾವ ಕ್ಷಣದಲ್ಲಿ ಏನು ಬೇಕಾದರೂ ಆದೀತು. ದೋಣಿಗಳು ಪಡಪತ್ತ ಧಾವಿಸಿ ಬರುತ್ತಿವೆ. ಇನ್ನೇನು ಭೂಮಿಸಿಕ್ಕಿತೆಂಬ ಸಂತೋಷ ಸಂಭ್ರಮ. ಅಷ್ಟರಲ್ಲಿ ಬಿರುಗಾಳಿ ಬೀಸಿತು. ದೋಣಿಗಳ ಹಾಯಿಪಟಗಳು ಹರಿದು ಚಿಂದಿಯಾದುವು. ವ್ಯಾಪಾರಿಗಳು ಗಡಗಡನೆ ನಡುಗಿ ಹೋದರು. ಸಮುದ್ರರಾಜನ ಅಧಿಕಾರ, ಅರ್ಭಟಗಳ ಮಧ್ಯೆ ಹುಲುಮಾನವನ ಯೋಗ್ಯತೆ ಯಾವಲೆಕ್ಕ ? ಅವನ ಪರಾಕ್ರಮವೆಷ್ಟು ? ಅವನ ಧೈರ್ಯಸ್ಥೈರ್ಯಗಳೆಷ್ಟು ? ಪ್ರಕೃತಿಯ ಆ ಭೀಮ ಭೀಕರಶಕ್ತಿಯ ಮುಂದೆ, ಮಾನವ ತತ್ತರಿಸಿ ಹೋಗುತ್ತಾನೆ. ಆ ಕಠಿಣ ವಿಕಟ ಪರಿಸ್ಥಿತಿಯಲ್ಲಿ ಮಾನವನ ಯೋಗ್ಯತೆ ಸಂಪೂರ್ಣ ಸಾಯುತ್ತದೆ.

ಸಾಗರದ ಈ ದಡದಲ್ಲಿ ಕಾಷಾಯವಸ್ತ್ರ ಧಾರಿಯೂ, ಕರುಣಾಮೂರ್ತಿಯೂ ಆದ ಯತಿಗಳೊಬ್ಬರು ಆಹ್ನೀಕಕ್ಕೆ ಬಂದಿದ್ದಾರೆ. ಆತನ ತೇಜೋಮಯ ಮುಖಮಂಡಲ, ಗಂಭೀರವಾದ ನಿಲುವು, ತಪಸ್ಸಂಯಮಗಳೆ ಮೂರ್ತಿಭವಿಸಿ ದಂತಿರುವ ಸುಂದರ ಸುಪುಷ್ಟ ಶರೀರ – ಕರುಣೆ ತುಂಬಿದ ಆ ಕಣ್ಣುಗಳು... ವೇದಮಂತ್ರಗಳ–ನ್ನುಚ್ಚರಿಸುತ್ತಿರುವ ಆ ಭವ್ಯಮೂರ್ತಿ, ಕಂಡವರ ಮನದಲ್ಲಿ ಕೈಮುಗಿಯಬೇಕೆಂಬ ಭಾವನೆಯನ್ನುಂಟುಮಾಡುವಂತಿದೆ. ಸಾಗರದ ಅರ್ಭಟಕ್ಕೆ ತಲ್ಲಣಿಸಿ ಹೋದ ವ್ಯಾಪಾರಿಗಳು, ನೆರವಿಗಾಗಿ ಕೂಗಿಕೊಳ್ಳುವುದನ್ನು ಯತಿವರೇಣ್ಯರು ಗಮನಿಸಿದರು. ದೂರದಲ್ಲಿ ಬರುತ್ತಿರುವ ದೋಣಿಗಳು ವಿಪತ್ತಿನ ಅಂಚಿನಲ್ಲಿವೆಯೆಂದು ಅವರಿಗರ್ಥವಾಯ್ತು. ಯತೀಶ್ವರರು ದೋಣಿಗಳನ್ನು ಕರುಣೆಯಿಂದ ಒಮ್ಮೆ ನೋಡಿದರು; ಕಣ್ಣರಳಿಸಿ ಒಮ್ಮೆ ಸಾಗರವನ್ನು ನೋಡಿದರು; ನಸುನಗುತ್ತ ಒಮ್ಮೆ ಗಗನವನ್ನು ನೋಡಿದರು. ಪಯಣಿಗರಿಗೆ ಸಾಂತ್ವನ ನೀಡುವಂತೆ – ಆ ಕಾರುಣ್ಯಮೂರ್ತಿ–ತಮ್ಮ ಮೈಮೇಲಿದ್ದ ವಸ್ತ್ರವನ್ನು ಕೈಲಿ ಹಿಡಿದು ಬೀಸಿದರು–ಇಲ್ಲಿ ಬನ್ನಿ – ಸುರಕ್ಷಿತವಾಗಿರುವಿರಿ – ಎಂಬಂತೆ. ಅಷ್ಟರಲ್ಲಿ ಪ್ರಕೃತಿ ಶಾಂತವಾಯ್ತು. ಮಗನ ಪ್ರಾರ್ಥನೆಯನ್ನು ತಂದೆ ನಡೆಸಿಕೊಡುವಂತೆ ಬಿರುಗಾಳಿಯೂ ತಗ್ಗಿತು. ಸಾಗರದ ಅಟ್ಟಹಾಸವೂ ಅಡಗಿತು. ಹಾಯಿದೋಣಿಗಳು ಕ್ಷೇಮವಾಗಿ ದಡಕ್ಕೆ ಬಂದವು. ನಾವು ಬದುಕಿದ್ದು ಈ ಮಹಾತ್ಮರ ಮಹಿಮೆಯಿಂದಲೆ–ಎಂದು ವ್ಯಾಪಾರಿಗಳಿಗೆ ಖಚಿತವಾಯ್ತು. ಆ ಪುಣ್ಯಮೂರ್ತಿಯ ಪಾದಾರವಿಂದಗಳಿಗೆರಗಿ, ಆನಂದ ಪುಲಕಿತರಾಗಿ, ಮಾತಾಡಲು ತೋಚದೆ ಕ್ಷಣಕಾಲ ಬೆಪ್ಪಾಗಿ ನಿಂತರು. ಕೃತಜ್ಞತಾಪೂರ್ವಕವಾಗಿ ಆನಂದಾಶ್ರುಧಾರೆ, ಅವರ ಕಣ್ಣುಗಳಲ್ಲಿ ತಾನೇತಾನಾಗಿ ಪ್ರವಹಿಸಿತು.

“ಈಗ ಸಮಾಧಾನವಾಯ್ತೇ ? ದೈವಕೃಪೆಯಿಂದ ಎಲ್ಲವೂ ಸರಿಹೋಗುತ್ತದೆ.”

ಯತೀಂದ್ರರು ನಗುತ್ತ ನುಡಿದರು.

“ಪೂಜ್ಯರಾದ ತಮ್ಮ ಅನುಗ್ರಹದಿಂದ ನಾವು ಬದುಕಿಬಂದೆವು. ತಾವು ಮಾಡಿದ ಜೀವದಾನದ ಈ ಮಹೋಪಕಾರಕ್ಕೆ, ನಾವು ಚಿರಋಣಿಗಳಾಗಿದ್ದೇವೆ.”

ವ್ಯಾಪಾರಿಗಳು ಕೈಮುಗಿದು ಹೇಳಿದರು.

“ಎಲ್ಲವೂ ಶ್ರೀಹರಿಯ ಕೃಪೆ. ಆತನು ಭೃತ್ಯಾರ್ತಿಹರ. ಪ್ರಣತಭಕ್ತ, ಭವಾಬ್ಧಿಪೋತ. ಮಹತ್ತರವಾದ ಆಪತ್ತು ವಿಪತ್ತು ಬಂದಾಗ ಆತನಲ್ಲದೆ ಇನ್ಯಾರು ರಕ್ಷಿಸುವವರು ? ಆತ ಭಕ್ತಪ್ರಿಯನಾಗಿದ್ದಾನೆ. ಅಘಟನಘಟನಾ ಸಮರ್ಥನಾಗಿದ್ದಾನೆ. ಆತನ ಮಹಿಮೆ ಅಚಿನ್ತ್ಯ–ಅದ್ಭುತ ಅಪಾರ–ರಮ್ಯ. ‘ಸಂತತಂ ಚಿನ್ತಯೇ ಅನಂತಂ ಅನ್ತ್ಯಕಾಲೇ ವಿಶೇಷತಃ’ ಆತನನ್ನು ಸರ್ವದಾ ಧ್ಯಾನಿಸಿರಿ. ಅಂತ್ಯಕಾಲದಲ್ಲಿ ವಿಶೇಷವಾಗಿ ಧ್ಯಾನಿಸಿರಿ.”

**ವಿದ್ವಾನ್ ಬ. ನ. ಗುಂಡೂರಾವ್**

ಪೂಜ್ಯರ ಮಾತು ಕೇಳುತ್ತ ವ್ಯಾಪಾರಿಗಳು ಧನ್ಯರಾದರು. ಪ್ರಾಣದಾನವಮಾಡಿದ ಈ ಪೂಜ್ಯರಿಗೇನಾದರೂ ಕಾಣಿಕೆ ಸಲ್ಲಿಸಬೇಕೆಂದು ಅವರು ಯೋಚಿಸಿದರು. ಅವರಿದುವರೆಗೆ–ಅವ್ಯಾಜಕರುಣೆ, ನಿರ್ವ್ಯಾಜ ಪ್ರೇಮವನ್ನು ಕಂಡೇ ಇರಲಿಲ್ಲ. ಅಂದು ಆ ಯತಿಗಳಲ್ಲಿ ಕಂಡು ಆಶ್ಚರ್ಯ ಪಟ್ಟರು. ಅವರಿಗೇನು ಕೊಡುವುದು ? ದೋಣಿಯಲ್ಲಿರುವ ಮೆಣಸೇ ? ಏಲಕ್ಕಿಯೆ ? ಹಣವೇ ? ಎಷ್ಟು ಕೊಡುವುದು ? ಆನಂದ ಸಂತುಷ್ಟರಾದ ಪೂಜ್ಯರು ತಾವಾಗಿ ಏನೂ ಕೇಳುವವರಲ್ಲ;

"ತಾವೇನಾದರೂ ಕೇಳಲೇಬೇಕು; ನಾವು ಸಮರ್ಪಿಸಲೇಬೇಕು. ತಮ್ಮ ಅನುಗ್ರಹದಿಂದ ನಾವು ಬದುಕಿದೆವು. ತಾವು ದೊಡ್ಡ ಮನಸ್ಸು ಮಾಡಲೇಬೇಕು. ತಮ್ಮ ಅಪ್ಪಣೆ ನಮಗೆ ಶಿರೋಧಾರ್ಯವಾಗುತ್ತದೆ."

ವ್ಯಾಪಾರಿಗಳು ಕೇಳಿಕೊಂಡರು.

ಯತಿವರೇಣ್ಯರು ಮನದಲ್ಲೇ ನಗುತ್ತ, ಉಕ್ಕಿ ಬರುತ್ತಿರುವ ಹರ್ಷವನ್ನು ತಡೆದುಕೊಳ್ಳುತ್ತ ನುಡಿದರು–

"ಹಾಗಾದರೆ ನನಗೆ ಬೇಕಾದ್ದನ್ನು ಕೇಳಲೇನು?"

"ಅಗತ್ಯವಾಗಿ ಕೇಳೋಣವಾಗಲಿ"

"ನೀವು ಕೊಡಲು ಹಿಂಜರಿಯುವುದಿಲ್ಲವಷ್ಟೆ?"

"ಖಂಡಿತ ಇಲ್ಲ. ನಮಗೆ ಜೀವದಾನ ಮಾಡಿದ ಕೃಪಾಮೂರ್ತಿಗಳು ತಾವು"

"ಹಾಗಾದರೆ ಕೇಳಲೇನು ?"

"ಅಪ್ಪಣೆಯಾಗಬೇಕು"

"ನಿಮ್ಮ ದೋಣಿಯಲ್ಲಿರುವ ಆ..."

ಮೆಣಸೇ ? ಜೀರಿಗೆಯೇ ?"

"ಅಲ್ಲ"

"ಏಲಕ್ಕಿಯೆ ? ಲವಂಗವೇ ?"

"ಅಲ್ಲ"

"ಬೆಳ್ಳಿ ರೂಪಾಯಿಗಳ ಗಂಟೇ ?"

"ನಿಮ್ಮ ದೋಣಿಯಲ್ಲಿರುವ ಆ ಮಣ್ಣಿನುಂಡೆ–ಗೋಪೀಚಂದನದ ಮುದ್ದೆ ನನಗೆ ಬೇಕು."

ಇನ್ನೇನು ಕೇಳುವರೋ– ಎಂದು ಭಯಪಟ್ಟಿದ್ದ ವ್ಯಾಪಾರಿಗಳು–ಸ್ವಲ್ಪ ಶಾಂತವಾಗಿ ಉಸಿರಾಡಿರಬೇಕು–ಬಹುಶಃ !!

ಯತಿಗಳ ಕೋರಿಕೆ ಕೇಳಿ ಅವರಿಗೆ ತುಂಬ ನಗು ಬಂತು. ಕೇಳುವುದಕ್ಕೂ ವಿವೇಕವಿರಬೇಕು ; ಕೇಳಿಪಡೆಯುವುದಕ್ಕೂ ಅದೃಷ್ಟವಿರಬೇಕು–ಎಂದುಕೊಂಡರು. ಎಲ್ಲವನ್ನೂ ಬಿಟ್ಟು, ಮಣ್ಣಿನುಂಡೆ ಕೇಳುವುದೇ ? ಬೆಳ್ಳಿಯಲ್ಲ–ಬಂಗಾರವಲ್ಲ–ಹಣವಲ್ಲ–ಕಾಸಲ್ಲ–ಸಾಂಬಾರವಸ್ತುಗಳೂ ಅಲ್ಲ, ಯತಿಗಳು ಮಣ್ಣು ಮುದ್ದೆ ಕೇಳುತ್ತಿದ್ದಾರೆ – ಇದೇನು ಸೋಜಿಗ ? ಇವರಿಗೆ ಬುದ್ಧಿ ಇದೆಯೆ ? ನಮಗೇಕೆ ಆ ಚರ್ಚೆ ? ಅವರು ಕೇಳಿದ್ದು ಕೊಟ್ಟು, ಪುಣ್ಯ ಕಟ್ಟಿಕೊಂಡಾಯ್ತು; ನಮಗೆ ನಷ್ಟವೂ ಇಲ್ಲ. ಗೋಪೀಚಂದನದ ಮುದ್ದೆಯನ್ನು ಅವರಿಗೆ ಕೊಡುವುದೇ ಸೂಕ್ತ.

ವ್ಯಾಪಾರಿಗಳು ತೀರ್ಮಾನ ಮಾಡಿಕೊಂಡರು.

ಆ ಬೃಹದಾಕಾರದ ಮಣ್ಣು ಮುದ್ದೆಯನ್ನು ದೋಣಿಯಲ್ಲಿ ಭಾರದ ಸಮತೋಲನಕ್ಕಾಗಿ ಇಡಲಾಗಿತ್ತು. ಅದನ್ನು ಯತಿಗಳಿಗೆ ಸಂತೋಷವಾಗಿ ಕೊಟ್ಟರು.

"ವನ್ದೇ ಮಹಾಪುರುಷ ತೇ ಚರಣಾರವಿಂದಮ್" ಎಂದು ಪರಮ ಗೌರವದಿಂದ ಯತಿಗಳು ಗೋಪೀಚಂದನದ ಮುದ್ದೆಗೆ ನಮಸ್ಕಾರ ಮಾಡಿದರು. ಪರಮ ಭಕ್ತಿಯಿಂದ ಅದನ್ನು ಎರಡೂ ಕೈಗಳಿಂದೆತ್ತಿ ತಲೆಯಮೇಲಿಟ್ಟುಕೊಂಡರು. ಭಕ್ತ್ಯುದ್ರೇಕದಿಂದ ಅವರ ದೇಹ ಕಂಪಿಸಿತು. ಅನಿರ್ವಚನೀಯ ಸಂಭ್ರಮದಿಂದ ಅವರ ಕಣ್ಣುಗಳು ಹನಿಗೂಡಿದವು. ಕಟ್ಟೆಯನ್ನೊಡೆದು ಪ್ರವಾಹ ಮುನ್ನುಗ್ಗುವಂತೆ ಅವರ ಬಾಯಿಂದ ಕಾವ್ಯಧಾರೆ – ಸ್ತೋತ್ರರಸಧಾರೆ ಪ್ರವಹಿಸಲಾರಂಭಿಸಿತು.

ದೇವಕೀನಂದನ ನಂದ ಕುಮಾರ
ಬೃಂದಾವನಾಂಚಲ ಗೋಕುಲ ಚಂದ್ರ ।
ಕಂದ ಫಲಾಶನಸುಂದರ ರೂಪ
ನಂದಿತ ಗೋಕುಲ ವಂದಿತಪಾದ ॥

ವಂದಿತಾಶೇಷ ವಂದ್ಯೋರು ವೃಂದಾರಕಂ
ಚಂದನಾಚರ್ಚಿತೋದಾರ ಪೀನಾಂಸಕಂ

(28 ನೇ ಪುಟ ನೋಡಿ)

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
## ತಿರುಚಾನೂರು

### ಅರ್ಜಿತ ಸೇವಾ ವಿವರ

| | | | | |
|---|---|---|---|---|
| 1. | ದರ್ಶನ : | ವಿಶೇಷ ಪ್ರವೇಶ: ಪ್ರತಿಯೊಬ್ಬರಿಗೆ | ರೂ | 2–00 |
| 2. | ಅರ್ಜಿತ : | ಕಾಲಸೋಲ 1) ಪೊಂಗಲ್ | ರೂ | 55–00 |
| | | 2) ಪುಳಿಯೋಗರೆ | ರೂ | 50–00 |
| | | 3) ದಧ್ಯೋದನ | ರೂ | 40–00 |
| | | 4) ಕೇಸರಿಬಾತ್ | ರೂ | 85–00 |
| | | 5) ಸಕ್ಕರೆ ಪೊಂಗಲ್ | ರೂ | 65–00 |
| | | 6) ದೋಸೆ | ರೂ | 35–00 |
| | | 7) ಶಾಕರಬಾತ್ | ರೂ | 90–00 |
| | | 8) ಸೀರಾ | ರೂ | 155–00 |
| 3. | ಸೇವೆಗಳು : | 1) ನಿತ್ಯ ಅರ್ಚನೆ ಒಂದು ವರ್ಷಕ್ಕೆ | ರೂ | 150–00 |
| | | 2) ಸಹಸ್ರನಾಮಾರ್ಚನೆ | ರೂ | 6–50 |
| | | 3) ಅರ್ಚನೆ | ರೂ | 1–00 |
| | | 4) ಆರತಿ | ರೂ | 0–50 |
| | | 5) ಪೂರಾಭಿಷೇಕ (ಶುಕ್ರವಾರಗಳಲ್ಲಿ) | ರೂ | 100–00 |
| | | 6) ಊಂಜಲ್ ಸೇವೆ ( ,, ಸಂಜೆ) | ರೂ | 150–00 |
| | | 7) ತಿರುಚ್ಚಿ ಉತ್ಸವ | ರೂ | 63–00 |
| | | 8) ಗಜವಾಹನ | ರೂ | 32–00 |

—ಪೇಷ್ಕಾರ್

# ಶ್ರೀ ವ್ಯಾಸ ತತ್ತ್ವಜ್ಞರು

ಕೃಷ್ಣಾ ತುಂಗಭದ್ರಾನದಿಗಳ ನಡುವಿನ ವಿಶಾಲವಾದ ರಾಯಚೂರು ಜಿಲ್ಲಾ ಪ್ರದೇಶವು ಅಪರೋಕ್ಷ ಜ್ಞಾನಿಗಳ ತವರೂರು. ಶ್ರೀಹರಿದಾಸ ಕೂಟದವರ ನಾಟ್ಯರಂಗವು. ಹಂಪೆಯಲ್ಲಿ ನರಹರಿ ತೀರ್ಥರೂ, ಆನೆಗೊಂದಿಯಲ್ಲಿ ವ್ಯಾಸರಾಜರೂ, ಸನಿಹದಲ್ಲೇ ಪುರಂದರದಾಸರೂ, ಚೀಕಲಪರಿವಿಯಲ್ಲಿ ವಿಜಯದಾಸರು, ಉತ್ತನೂರಲ್ಲಿ ಗೋಪಾಲದಾಸರೂ ಮತ್ತು ಅವರ ನಾಲ್ವರು ತಮ್ಮಂದಿರೂ, ಮಾನವಿಯಲ್ಲಿ ಜಗನ್ನಾಥದಾಸರೂ, ಕೊಪ್ಪಳ ತಾಲೂಕಿನ ಮೋದನೂರಲ್ಲಿ ವಿಷ್ಣು ತೀರ್ಥರೂ (ಅಡವಿಸ್ವಾಮಿಗಳು,) ಕುಪ್ಪಮೂರ್ತಿ ಎಂಬಲ್ಲಿ ಕೃಷ್ಣದ್ವೈಪಾಯನರೂ, ಲಿಂಗಸೂಗೂರಿನಲ್ಲಿ ಪ್ರಾಣೇಶದಾಸರೂ ಮತ್ತು ಅವರ ಶಿಷ್ಯರೂ, ಹಾಗೂ ಕೃಷ್ಣಾನದಿ ನೀರಿನ ನಡುಗಡ್ಡೆಯಲ್ಲಿ ಜಿತಾಮಿತ್ರರೂ, ರಾಜವಳಿಗ್ರಾಮದಲ್ಲಿ ಭುವನೇಂದ್ರತೀರ್ಥ ಶ್ರೀಪಾದಂಗಳವರೂ, ಕಲ್ಲೂರಿನಲ್ಲಿ ಸುಬ್ಬಣ್ಣ ದಾಸರೂ, ಸುರಪುರದಲ್ಲಿ ಆನಂದ ದಾಸರೂ, ಇಭರಾಂಪುರದ ಅಪ್ಪಾವರೂ ಇದೇ ಪ್ರದೇಶದಲ್ಲೇ ಇದ್ದವರು. ಹೆಚ್ಚೇನು ಹೇಳುವುದು? ಸನ್ಯಾಸಕುಲದೀಪಕರಾದ ರಾಘವೇಂದ್ರ ಗುರುಸಾರ್ವಭೌಮರವರೂ ಸಹ ತುಂಗಭದ್ರಾನದೀ ತೀರದ ಮಂತ್ರಾಲಯದಲ್ಲೇ ನೆಲೆಸಿರುವರು. ಈ ಮಹನೀಯರ ಜ್ಞಾನ, ಭಕ್ತಿ, ವೈರಾಗ್ಯಗಳೇ ಕೃಷ್ಣಾ ತುಂಗಾ, ಭದ್ರಾನದಿಗಳ ರೂಪದಲ್ಲಿ ಹರಿಯುತ್ತಿವೆ ಎಂದರೆ ಅತಿಶಯೋಕ್ತಿಯಾಗಲಾರದು.

ಭಾರತಕ್ಕೆ ಭೂಷಣವಾದ, ತತ್ತ್ವ ಜ್ಞಾನಕ್ಕೆ ಭಂಡಾರದಂತಿರುವುದು ಈ ರಾಯಚೂರು ಜಿಲ್ಲೆ. ಇಲ್ಲಿ ದಿನ್ನಿ ಎಂಬ ಒಂದು ಗ್ರಾಮವಿದೆ. ಈ ಗ್ರಾಮದಲ್ಲಿ ಸದಾಚಾರ ಸಂಪನ್ನರೂ, ಸಚ್ಛಾಸ್ತ್ರ ಪಾರಂಗತರೂ ಆದ ಜನಾರ್ದನಾಚಾರ್ಯರೆಂಬುವರು ವಾಸಿಸುತ್ತಿದ್ದರು, ಇವರ ಮಕ್ಕಳೇ ವೆಂಕಟ ನರಸಿಂಹಾಚಾರ್ಯರೆಂಬುವರು. ಇವರೂ ಸಹ ತಮ್ಮ ತಂದೆಯವರಂತೆ ಬಹಳ ದೊಡ್ಡ ವಿದ್ವಾಂಸರಾಗಿದ್ದು ಅನೇಕ ಶಿಷ್ಯರಿಗೆ ಪಾಠವನ್ನು ಹೇಳುತ್ತಿದ್ದರು. ಇವರು ತಮ್ಮ ಶಿಷ್ಯರ ಪ್ರಾರ್ಥನೆಯಂತೆ ದಿನ್ನಿ ಗ್ರಾಮವನ್ನು ಬಿಟ್ಟು ಗದ್ವಾಲ ತಾಲೂಕಿಗೆ ಸೇರಿದ ಐಜಿ ಎಂಬ ಊರಿಗೆ ಬಂದು ನೆಲೆಸಿದರು. ಅಲ್ಲಿನ ಜನರಿಂದ ಬಹು ಶ್ಲಾಘಿತರಾದರು. ಅವರಿಗೆ ಯಾವುದಕ್ಕೂ. ಕೊರತೆ ಇರಲಿಲ್ಲ. ಜ್ಞಾನಿಗಳಾದ ಆಚಾರ್ಯರಿಗೆ ಇದ್ದ ಒಂದೇ ಒಂದು ಕೊರತೆ ಎಂದರೆ ಸಂತಾನವಿಲ್ಲದ್ದು. ಅದಕ್ಕಾಗಿ ಅವರು ಸಕಲೇಷ್ಟಪ್ರದಾಯಕನಾದ ತಿರುಪತಿಯ ತಿಮ್ಮಪ್ಪನಿಗೆ ತಮ್ಮ ಮೊರೆಯನ್ನು ಸಲ್ಲಿಸಿದರು. ಕರುಣಾಸಿಂಧುವೂ ಭಕ್ತ ಬಂಧುವೂ ಆದ ಆ ಶ್ರೀನಿವಾಸನ ಕೃಪೆಯಿಂದ ಆಚಾರ್ಯರಿಗೆ ಶಾ॥ ಶಕ ೧೬೩೬ ರಲ್ಲಿ ಪುತ್ರೋತ್ಸವವಾಯಿತು. ಅವರು ತಮ್ಮ ಮಗುವಿಗೆ ವೆಂಕಟರಾಮಾಚಾರ್ಯರೆಂದೇ ನಾಮಕರಣ ಮಾಡಿದರು

ವೆಂಕಟರಾಮಾಚಾರ್ಯರಿಗೆ ಅವರ ತಂದೆ ಶಾಸ್ತ್ರವಿಧಿಗಳನ್ನೆಲ್ಲಾ ಸಕಾಲಕ್ಕೆ ನೆರವೇರಿಸಿದರು. ಆದರೆ ವೃದ್ಧಿಯನ್ನೈದುತ್ತಿದ್ದ ಬಾಲಕನು ಬಾಲ್ಯದಿಂದಾರಂಭಿಸಿ ಸುಮಾರು ಇಪ್ಪತ್ತೆಂಟು–ಮೂವತ್ತು ವರ್ಷಗಳವರೆವಿಗೂ ಬಹಳ ದಡ್ಡನಾಗಿದ್ದು ಜನರಿಂದ ತಿರಸ್ಕೃತನಾಗಿದ್ದನು. ಇದು ತಂದೆ ತಾಯಿಗಳ ದುಃಖಕ್ಕೆ ಕಾರಣವಾಗಿತ್ತು.

ಆಗಿನ ಕಾಲದಲ್ಲಿ ಐಜಿಗ್ರಾಮಕ್ಕೆ ಕೇವಲ ಎರಡು ಮೈಲಿ ಮಾತ್ರ ದೂರದಲ್ಲಿರುವ ಉತ್ತನೂರಿನಲ್ಲಿ ಜಾತಾಪರೋಕ್ಷಿಗಳಾಗಿದ್ದ ಗೋಪಾಲದಾಸರು ತಮ್ಮ ತ್ರಿಕಾಲಜ್ಞಾನದಿಂದ ಜನರಿಗೆ ಭವಿಷ್ಯಗಳನ್ನು ಹೇಳುತ್ತ ಅವರ ಸಂಕಷ್ಟಗಳನ್ನು ಪರಿಹರಿಸುತ್ತಿದ್ದರು. ಸತ್ಯವನ್ನೇ ನುಡಿಯುತ್ತಿದ್ದ ಅವರ ಪ್ರಶಂಶೆಯು ಬಹು ವಿಸ್ತೃತವಾಗಿದ್ದ ಕಾರಣ ಅವರ ಮಹಿಮೆಯನ್ನು ಕೇಳಿದ್ದ ವೆಂಕಟರಾಮಾಚಾರ್ಯರ ತಾಯಿಯು ತಮ್ಮ ಪತಿಯಲ್ಲಿ ವಿನಯದಿಂದ 'ಗೋಪಾಲದಾಸರಲ್ಲಿ ಹೋಗಿ ತಮ್ಮ ಪುತ್ರನ ಭವಿಷ್ಯವನ್ನು ತಿಳಿದುಕೊಂಡು ಬರಲು' ಪ್ರತಿನಿತ್ಯವೂ ಒತ್ತಾಯಿಸಲಾರಂಭಿಸಿದರು. ಆದರೆ ಘನವಿದ್ವಾಂಸರಾಗಿದ್ದ ಆಚಾರ್ಯರಿಗೆ ಗೋಪಾಲದಾಸರಲ್ಲಿಗೆ ಹೋಗಿ ಬರುವುದು ತಮ್ಮ ಗೌರವಕ್ಕೆ ತಕ್ಕುದಲ್ಲವೆನಿಸಿತ್ತು. ಆದರೂ ಕೊನೆಗೆ ಆಚಾರ್ಯರು ತಮ್ಮ ಪತ್ನಿಯ ಮಾತಿಗೆ ಮಣಿದರು. ಅವರು ತುಲಸಿಯನ್ನು ತರುವ ನೆಪವನ್ನು ಮಾಡಿಕೊಂಡು ಐಜಿಯಿಂದ ಉತ್ತನೂರಿಗೆ ಹೊರಟರು. ಅವರ ಪತ್ನಿಯು ದಾಸರಲ್ಲಿಗೆ ಬರಿಗೈಯಿಂದ ತಮ್ಮ ಪತಿಯು ಹೋಗುವುದನ್ನು ಇಚ್ಛಿಸದೆ ದಾಸರಿಗೆ ಕಾಣಿಕೆಯಾಗಿ ಎರಡು ಉತ್ತತ್ತಿಗಳನ್ನು ಆಚಾರ್ಯರ ಕೈಗಿತ್ತಿದ್ದರು.

ಆಚಾರ್ಯರು ಉತ್ತನೂರಿಗೆ ಬಂದು ಅಲ್ಲಿ ಜಾಗೃತನಾಗಿರುವ ಶ್ರೀನಿವಾಸದೇವರ ಮಂದಿರಕ್ಕೆ ಹೋದರು. ಅವರು ಗೋಪಾಲದಾಸರಲ್ಲಿಗೆ ಹೋಗಲು ಅವರ ಘನತೆಯು ಅಡ್ಡವಾಗಿದ್ದುದರಿಂದ ಅವರು ದಾಸರ ಮನೆಗೆ ಮನೆಗೆ ಹೋಗಲಿಲ್ಲ, ನೇರವಾಗಿ ದೇವಸ್ಥಾನಕ್ಕೆ ಹೋದರು. ಆದರೆ ಅವರ ಮನಸ್ಸನ್ನು ಅರಿತ ಗೋಪಾಲದಾಸರು ತಾವೇ ವೆಂಕಟನರಸಿಂಹಾಚಾರ್ಯರನ್ನು ತೋಷಪಡಿಸಲೋಸುಗ ಆಚಾರ್ಯರು ದೇವಸ್ಥಾನಕ್ಕೆ ಬರುವುದಕ್ಕೆ ಮುಂಚಿತವಾಗಿಯೇ ಅಲ್ಲಿಗೆ ಹೋಗಿ ದ್ವಾರದ ಪಾಳಿಯಲ್ಲಿ ಕುಳಿತು [illegible] ಯಜ್ಞೋಪವೀತಕ್ಕಾಗಿ ಹತ್ತಿಯ ನೂಲನ್ನು ತೆಗೆಯುತ್ತಾ ಕುಳಿತಿದ್ದರು. ಅವರನ್ನು ಕಂಡು ಕಾಣದಂತೆ ಆಚಾರ್ಯರು ದೇವರ ಪ್ರದಕ್ಷಿಣೆಯನ್ನು ಹಾಕಲಾರಂಭಿಸಿದರು, ಆದರೆ ದಾಸರೊಡನೆ ಮಾತನಾಡಲು ತುಟಿಗಳನ್ನು ಮಾತ್ರ ಬಿಚ್ಚಲಿಲ್ಲ. ಆಗ ಭಕ್ತಾಗ್ರಣಿಗಳಾದ ಗೋಪಾಲದಾಸರೇ ಆಚಾರ್ಯರನ್ನು ವಿಶ್ವಾಸದಿಂದ ಮಾತನಾಡಿಸಿ "ಆಚಾರ್ಯರೇ, ನಮ್ಮ ಅಕ್ಕನವರ ಒತ್ತಾಯಕ್ಕೆ ಮಣಿದು ಮಗನ ಭವಿಷ್ಯವನ್ನೂ ಕೇಳಲು ಬಂದಿರುವಿರಿ. ಸಿಂಹದ ಹೊಟ್ಟೆಯಲ್ಲಿ ಸಿಂಹವೇ ಜನಿಸಿರುತ್ತದೆ. ನೀವು ಚಿಂತಿಸುವ ಅಗತ್ಯವಿಲ್ಲ" ಎಂದರು. ಆಗ ಆಚಾರ್ಯರು ದಾಸರಲ್ಲಿದ್ದ ಸೌಜನ್ಯ, ಜ್ಞಾನ, ಭಕ್ತಿ, ವೈರಾಗ್ಯ, ತೇಜಸ್ಸುಗಳನ್ನು ಕಂಡು ಬೆರಗಾದರು. ಅವರು ಧನ್ಯ ಮನಸ್ಕರಾಗಿ ಎರಡು ಉತ್ತತ್ತಿಗಳನ್ನು ದಾಸರಿಗೆ ಅರ್ಪಿಸಿ ಅವರಿಂದ ಬೀಳ್ಕೊಂಡು ಮನೆಗೆ ಹಿಂದಿರುಗಿದರು.

ಮುಂದಿನ ಆಶ್ಚರ್ಯಕರವಾದ ಸಂಗತಿ ಎಂದರೆ ಬಹುಶಃ ವಾಗ್ದೇವಿಯು ದಾಸರ ಶುಭ ವಚನಕ್ಕಾಗಿ ಕಾಯುತ್ತಿದ್ದಳೋ ಏನೋ ಎಂಬಂತೆ ಅತಿ ಶೀಘ್ರವಾಗಿ ವೆಂಕಟರಾಮಾಚಾರ್ಯರು ಸರ್ವ ಗ್ರಂಥಗಳನ್ನು ತಮ್ಮ ಪಿತೃಮುಖೇನ ಅಧ್ಯಯನ ಮಾಡಿ ಚತುಶ್ಶಾಸ್ತ್ರಗಳನ್ನು ತಮ್ಮ ಕರತಲಾಮಲಕ ಮಾಡಿಕೊಂಡರು. ಅವರು ಅಗ್ನಿಹೋತ್ರಿಗಳಾಗಿ ನಿತ್ಯವೂ ಯಜ್ಞ ಪುರುಷನನ್ನು ತೃಪ್ತಿಪಡಿಸುತ್ತ ಘನತರವಿದ್ವಾಂಸರೆಂದು ದಿಗಂತವ್ಯಾಪ್ತವಾದ ಕೀರ್ತಿಯನ್ನು ಅತಿಶೀಘ್ರದಲ್ಲಿಯೇ ಪಡೆದರು. ಚತುರ್ದಿಕ್ಕುಗಳಿಂದ ತಂಡೋಪತಂಡವಾಗಿ ಶಿಷ್ಯರು ಇವರಲ್ಲಿಗೆ ಪಾಠಕ್ಕೆ ಬರಲಾರಂಭಿಸಿದರು. ಆಚಾರ್ಯರು ಎಲ್ಲಾ ಶಿಷ್ಯರನ್ನು ತಮ್ಮಲ್ಲಿಟ್ಟು ಕೊಂಡು ಅವರ ಯೋಗಕ್ಷೇಮಗಳ ಜೊತೆಗೆ ಜ್ಞಾನದಾನವನ್ನು ಮಾಡುತ್ತಿದ್ದರು.

ಬಿ. ಸತ್ಯನಾರಾಯಣಾಚಾರ್ಯ

ಕೆಲವು ಕಾಲಾನಂತರದಲ್ಲಿ ವೆಂಕಟರಾಮಾಚಾರ್ಯರು ಬೀಚಪಲ್ಲಿ ಎಂಬ ಗ್ರಾಮಕ್ಕೆ ಬಂದು ನೆಲೆಸಿ ಅಲ್ಲಿರುವ ವ್ಯಾಸರಾಜರಿಂದ ಪ್ರತಿಷ್ಠಿತವಾಗಿರುವ ಪ್ರಾಣದೇವರ ಸೇವೆಯನ್ನು ಸತತವಾಗಿ ಹನ್ನೆರಡು ವರ್ಷಗಳ ಕಾಲ ಮಾಡಿ, ಹರಿವಾಯುಗಳ ಅನುಗ್ರಹದಿಂದ "ಶ್ರೀವಾಸುದೇವವಿಠಲ" ಎಂಬ ಅಂಕಿತವನ್ನು ಪಡೆದು ಅನೇಕ ದೇವರ ನಾಮಗಳನ್ನು, ಸುಳಾದಿ, ಉಗಾಭೋಗಗಳನ್ನೂ ರಚಿಸಿದರು. ತರುವಾಯ ಶ್ರೀಹರಿಯ ಪ್ರೇರಣೆಯಂತೆ ಅವರು ಬೀಚಪಲ್ಲಿ ಗ್ರಾಮವನ್ನು ಬಿಟ್ಟು ಚ್ಯವನಋಷಿಗಳ ಆಶ್ರಮವೆಂದು ಪ್ರಸಿದ್ಧಿಯನ್ನು ಪಡೆದಿರುವ ವೇಣೀಸೋಮಪುರವೆಂಬ ತುಂಗಭದ್ರಾನದಿಯ ದಂಡೆಯಮೇಲಿರುವ ಬಲು ರಮಣೀಯವಾದ ಏಕಾಂತಸ್ಥಳಕ್ಕೆ ಧಾವಿಸಿ ಅಲ್ಲಿ ತಮ್ಮ ಶಿಷ್ಯರಿಗೆ ಪ್ರತಿನಿತ್ಯವೂ ಪಾಠಪ್ರವಚನಗಳನ್ನು ನಡೆಸಲಾರಂಭಿಸಿದರು, ಇವರು ಹನ್ನೆರಡು ಸಲ ಸುಧಾಮಂಗಳ ಮಾಡಿದ್ದಾರೆ. ಗದ್ವಾಲ ಸಂಸ್ಥಾನದ ಅರಸರಿಗೆ ಇವರಲ್ಲಿ ತುಂಬಾ ಗೌರವವು ಇದ್ದಿತು. ಇವರು ವರ್ಷದಲ್ಲಿ ಆರು ತಿಂಗಳು ಊರಲ್ಲಿದ್ದು ಉಳಿದ ಆರು ತಿಂಗಳು ಸಂಚಾರ ಮಾಡುತ್ತಿದ್ದರು. ಅವರು ಸಂಚಾರದಲ್ಲಿದ್ದಾಗ ಬಂದ ಹಣವನ್ನು ತಿರುಪತಿಯ ಶ್ರೀನಿವಾಸನಿಗೇ ಅರ್ಪಿಸುತ್ತಿದ್ದರು.

ಇವರು ಒಮ್ಮೆ ಗದ್ವಾಲಸಂಸ್ಥಾನದ ರಾಜರ ಪ್ರಾರ್ಥನೆಯಂತೆ ಅಲ್ಲಿ ನಡೆಯುತ್ತಿದ್ದ ವಿದ್ವತ್ಸಭೆಗೆ ತಮ್ಮಲ್ಲಿದ್ದ ನೀರಿನವನೊಬ್ಬನಿಗೆ ಮಂತ್ರಾಕ್ಷತೆಯನ್ನು ಕೊಟ್ಟು ಕಳುಹಿದರು. ಅವರ ಅನುಗ್ರಹದ ಬಲದಿಂದ ಶುಂಠನಾದ ಆ ನೀರಿನವನೂ ತನ್ನ ವಾಕ್ಪ್ರವಾಹದಿಂದ ವಿದ್ವತ್ಸಭೆಯಲ್ಲಿ ಬಹುಮಾನಿತನಾಗಿ ಬಂದು ಗುರುಗಳಿಗೆ ವಂದಿಸಿದನು. ಮತ್ತೊಮ್ಮೆ ಪೂನಾ ವಿದ್ವತ್ಸಭೆಯಲ್ಲಿ ಇವರ ನಾಲ್ಕುಜನ ಶಿಷ್ಯರು ನಾಲ್ಕುವಿಧ ಬೇರೆ ಬೇರೆ ವಿಷಯಗಳಲ್ಲಿ ತಮ್ಮ ವಿದ್ವತ್ಪ್ರತಿಭೆಯನ್ನು ತೋರಿ ಬಹುಮಾನಿತರಾಗಿ, ತಾವೆಲ್ಲರೂ ಒಬ್ಬರೇ ಆದ ಗುರುಗಳ ಶಿಷ್ಯರೆಂದು ಸಾರಿ, ತಮ್ಮ ಗುರುಗಳಾದ ವೆಂಕಟರಾಮಾಚಾರ್ಯರು ಚತುಶ್ಶಾಸ್ತ್ರಪಾರಂಗತರೆಂಬುದನ್ನು ಶ್ರುತಪಡಿಸಿದರು. ಹಾಗೆಯೇ ಅರಣೀ ಸಂಸ್ಥಾನದಲ್ಲಿಯೂ ಇವರ ಶಿಷ್ಯರು ವಿದ್ವತ್ಸಭೆಯಲ್ಲಿ ವಿಜಯಶೀಲರಾಗಿ ಅಲ್ಲಿನ ಕಟ್ಟಳೆಯಂತೆ ಬೋರಲು ಇಟ್ಟಿದ್ದ ಭೇರಿಯನ್ನೂ ಜಯಪ್ರತಿಕೆಯನ್ನೂ ತಂದು ಗುರುಗಳಿಗೆ ಅರ್ಪಿಸಿದರು.

ಇವರ ಶಿಷ್ಯ ಕೋಟಿಯ ಮಧ್ಯದಲ್ಲಿ ಸಿದ್ಧಾಪುರದ ಜಯತೀರ್ಥಾಚಾರ್ಯರು ಸುಪ್ರಸಿದ್ಧರು, ಇವರೇ ಮುಂದೆ ವಿಷ್ಣುತೀರ್ಥರೆಂದು ಪ್ರಸಿದ್ಧರಾದ ಅಡವೀಸ್ವಾಮಿಗಳಾದರು. ಇವರನ್ನು ಅರಣ್ಯಕಾಚಾರ್ಯರೆಂದೂ ವಿದ್ವಜ್ಜನರು ಕರೆಯುತ್ತಾರೆ. ಇವರು ನೂರಾ ಎಂಟು ಸಲ ಸುಧಾಮಂಗಲಮಾಡಿದ್ದಾರೆ. ಮತ್ತು ಭಾಗವತಸಾರೋದ್ಧಾರ, ಅಧ್ಯಾತ್ಮರಂಜನಿ, ಆಜ್ಞಾಪತ್ರ, ಷೋಡಶಿ, ಚತುರ್ದಶಿಗಳೆಂಬ ಗ್ರಂಥಗಳನ್ನು ಬರೆದಿದ್ದಾರೆ. ಇವರಿಗೆ ತಮ್ಮ ವಿದ್ಯಾಗುರುಗಳಾದ ವೆಂಕಟರಾಮಾಚಾರ್ಯರಲ್ಲಿ ಬಹು ಭಕ್ತಿ ಇದ್ದಿತು. ಒಮ್ಮೆ ಗುರುಶಿಷ್ಯರು ಸಂಚಾರದಲ್ಲಿದ್ದಾಗ ಬಿಸಿಲಿನ ದೆಸೆಯಿಂದ ಗುರುಗಳು ತಮ್ಮ ಪಾದರಕ್ಷೆಯನ್ನು ತಮ್ಮ ಶಿಷ್ಯನಿಗೆ ಕೊಟ್ಟು ತಾವು ಕುದುರೆಯ ಮೇಲೆ ಪ್ರಯಾಣ ಮಾಡಿದರು. ಆದರೆ ಅವರ ಶಿಷ್ಯರು ತಮ್ಮ ಶಾಲಿನಲ್ಲಿ ಸುತ್ತಿ ಕೊಂಡು ತಮ್ಮ ತಲೆ ಮೇಲಿಟ್ಟು ಕೊಂಡು ಗ್ರಾಮವನ್ನು ತಲುಪಿದರಂತೆ. ಇಂಥಾ ಗುರುಭಕ್ತಿ ಅವರಿಗೆ ಇವರಲ್ಲಿ! ವೆಂಕಟರಾಮಾಚಾರ್ಯರಲ್ಲಿ ಶಿಷ್ಯರಾಗಿದ್ದ ಜಯತೀರ್ಥಾಚಾರ್ಯರು ತಮ್ಮ ಗುರುಗಳ ಮಹಿಮೆಯನ್ನು "ದಿಕ್ಪ್ರಾಂತಾತತ ಪುಣ್ಯಕೀರ್ತಿಸುಲತಾ ಸಂಶೋಭಿತ ಸ್ಸಂತತಂ ನಾನಾ ಶಿಷ್ಯ ತದೀಯ ಶಿಷ್ಯ ವಿಲಸಚ್ಛಾಕೋಪ ಶಾಖಾನ್ವಿತಾಃ ॥ ಐಜೀ ವೇಂಕಟನಾರಸಿಂಹ ದಯಿತಾ ದಿವ್ಯಾಲವಾಲೋದ್ಭವಾಃ॥ ಸಂಭೂಯಾತ್ ಸಕಲೇಷ್ಟದೋ ಮಮ ಸದಾ ರಾಮಾರ್ಯ ಕಲ್ಪದ್ರುಮಃ" ಎಂಬುದಾಗಿ ಕೊಂಡಾಡಿದ್ದಾರೆ.

ವೆಂಕಟರಾಮಾಚಾರ್ಯರಿಗೆ ಸ್ವಪ್ನದಲ್ಲಿ ಶ್ರೀವೇಣುಗೋಪಾಲ ಕೃಷ್ಣನು ತಾನಿರುವ ಸ್ಥಳವನ್ನು ಸೂಚಿಸಿದನು. ಅದರಂತೆ ವೆಲ್ಲೂರು ಗ್ರಾಮದಕೆರೆಯದಂಡೆಯಲ್ಲಿ ಅಗೆಯಲಾಗಿ ಅಲ್ಲಿ ಸುಂದರವಾದ ಶ್ರೀ ವೇಣುಗೋಪಾಲ ಕೃಷ್ಣನ ವಿಗ್ರಹವು ಪ್ರಾಪ್ತವಾಯಿತು. ಅವರು ಆ ವಿಗ್ರಹವನ್ನು ವೇಣಿಸೋಮಪುರದಲ್ಲಿ ಪ್ರತಿಷ್ಠಿಸಿದರು. ಅದನ್ನು ಇಂದಿಗೂ ಅಲ್ಲಿ ಕಾಣಬಹುದು.

ಒಮ್ಮೆ ಇವರು ತಿರುಪತಿಗೆ ಹೋಗಿದ್ದಾಗ ಅಲ್ಲಿ ಮಾರಿಕಾ ಉಪದ್ರವವಿದ್ದುದನ್ನು ತಿಳಿದು, ಅಲ್ಲಿನ ಜನರ ಪ್ರಾರ್ಥನೆಯಂತೆ "ಅಂಜಿಸುವುದೇಕಮ್ಮಾ ಕಂಜೋದ್ಭವನಮ್ಮಾ! ನೀ ಅಂಜಿಸಿದರೆ ಲೋಕ ಅಂಜದಿರುವುದೇ" ಎಂಬ ಪದವನ್ನು ಮಾಡಿ ದುರ್ಗೆಯನ್ನು ಪ್ರಾರ್ಥಿಸಿ ಉಪದ್ರವವನ್ನು ಪರಿಹರಿಸಿದರಂತೆ!

ಆಚಾರ್ಯರಿಗೆ ರಾಯರಲ್ಲಿ ಬಹಳ ಭಕ್ತಿಯು. ಒಮ್ಮೆ ತಮಗೆ ಅರ್ಥವಾಗದೆ ಇದ್ದ ಸುಧಾಭಾಗದಲ್ಲಿ ಚಿಂತಾಕ್ರಾಂತರಾಗಿದ್ದಾಗ ಅವರಿಗೆ ಶ್ರೀಮಂತ್ರಾಲಯದ ಪ್ರಭುಗಳು ಸ್ವಪ್ನದಲ್ಲಿ ಬಂದು "ಮೂಕ ಟಿಪ್ಪಣಿ (ಪರಿಮಳ) ಯನ್ನು ನೋಡಪ್ಪಾ" ಎಂದು ಸೂಚಿಸಿದರಂತೆ. ಹಾಗೆಯೇ ಆಚಾರ್ಯರು ಪರಿಮಳ ಗ್ರಂಥಾವಲೋಕನ

(28ನೇ ಪುಟ ನೋಡಿ)

# ಶಬ್ದ ಪ್ರಮಾಣ

ವೇದಾಂತ ಶಾಸ್ತ್ರದಲ್ಲಿ ಶಬ್ದಪ್ರಮಾಣ ಎಂಬ ಪ್ರಕ್ರಿಯಾ ಭಾಗ ಇದೆ. ಇದನ್ನು ಎಲ್ಲ ವೈದಿಕ ದರ್ಶನಗಳು ಅಂಗೀಕರಿಸಿವೆ. ವಿಶಿಷ್ಟಾದ್ವೈತ ದರ್ಶನದಲ್ಲಿ ಇದನ್ನು ವಿಶೇಷರೀತಿಯಲ್ಲಿ ವಿವರಿಸ ಲಾಗಿದೆ. ಅದನ್ನು ಸಂಗ್ರಹವಾಗಿ ತಿಳಿಸುವುದು ಈ ಲೇಖನದ ಉದ್ದೇಶ.

13ನೇ ಶತಮಾನದಲ್ಲಿ ಕವಿತಾರ್ಕಿಕಸಿಂಹರೆಂದೂ, ತಾರ್ಕಿಕಸಿಂಹರೆಂದೂ ಪ್ರಸಿದ್ಧರಾದ ವೇದಾಂತದೇಶಿಕರು ತಮ್ಮ ನ್ಯಾಯಪರಿಶುದ್ಧಿ ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ.

"ಆಪ್ತವಾಕ್ಯಃ ಶಬ್ದಃ ಆಪ್ತತ್ವಂ ನಾಮ ಯಥಾರ್ಥದರ್ಶಿತ್ವೇ ಸತಿ ಯಥಾದೃಷ್ಟಾರ್ಥವ ವಾದಿತ್ವಂ, ಪ್ರಕೃತ ವಾಕ್ಯಾರ್ಥಗೋಚರ ಯಥಾ ಜ್ಞಾನ ಜನ್ಯವಾದಿತ್ವಂ ಶಬ್ದಪ್ರಮಾಣ ಲಕ್ಷಣಂ. ಅಥಾನುಮೋದ್ಭವಂ ಸ್ಮೃತ್ವಾ ದೇವತ್ವೇನಾಪಿ ಸಂಸ್ಥಿತಂ ಮಧ್ಯೇ ತಯೋರಿಹೇದಾನೀಂ ಮಾನಂ ಶಬ್ದಂ ಪ್ರಚಕ್ಷ್ಮಹೇ".

ಆಪ್ತವಾಕ್ಯವು ಶಬ್ದಪ್ರಮಾಣವೆನಿಸುವುದು. ಆಪ್ತ ಎಂದರೆ ಇದ್ದುದನ್ನು ಇದ್ದಂತೆ ತಿಳಿದು ಹೇಳು ವುದು. ವಿಷಯದ ಯಥಾರ್ಥಜ್ಞಾನದಿಂದ ಉಂಟಾದ ವಾಕ್ಯವು ಶಬ್ದಪ್ರಮಾಣ. "ಯಾವ ವಾಕ್ಯದಲ್ಲಿ ಇಂದ್ರಿಯದೋಷ ಮತ್ತು ಬಂಧಕ ಪ್ರತ್ಯಯಗಳಿಲ್ಲವೋ ಅದು ಶಬ್ದಪ್ರಮಾಣ. ಸೃಷ್ಟಿಕಾಲದಲ್ಲಿ ಪರಮಾತ್ಮನು ವೇದವನ್ನು ಸ್ಮರಿಸಿ ಕೊಂಡು ಚತುರ್ಮುಖ ಬ್ರಹ್ಮನಿಗೆ ಉಪದೇಶ ಮಾಡಿದನೆಂದು ಶ್ರುತಿಯು ತಿಳಿಸುವುದರಿಂದ ವೇದ ಗಳ ನಿತ್ಯತ್ವ ಮತ್ತು ಅಪೌರುಷೇಯತ್ವ ಸಿದ್ಧ ವಾಯಿತು. ಆದುದರಿಂದ ಇದಕ್ಕೆ ಇಂದ್ರಿಯ ದೋಷವಿಲ್ಲ ಮತ್ತು ಬಂಧಕಜ್ಞಾನವೂ ಇಲ್ಲ.

ವೇದಶಬ್ದವು ಜ್ಞಾನಾರ್ಥಕವಾದ 'ವಿದ್' ಧಾತುವಿನಿಂದ ಬಂದ ನಾಮಪದ, ಈ ಶಬ್ದಕ್ಕೆ ಜ್ಞಾನ, ಜ್ಞಾನಭಂಡಾರ, ಜ್ಞಾನಬೋಧೆ ಎಂಬ ಅರ್ಥಗಳಾಗಿವೆ. ಪರಮಾತ್ಮನ ಜ್ಞಾನಸೂಚನೆ ವೇದ ಎಂಬ ಶಬ್ದಕ್ಕೆ ಅನ್ವರ್ಥವಾಗಿದೆ. ವೇದವು ಹಿಂದೂಧರ್ಮದ ಸಾರಸರ್ವಸ್ವ, ಹಿಂದೂಸಂಸ್ಕೃತಿಯ ಸರ್ವೋತ್ತಮ ಗ್ರಂಥ ಭಾರತೀಯರ ಸಭ್ಯತೆ, ಸಂಸ್ಕೃತಿ, ಸಮಾಜಧರ್ಮ – ಮುಂತಾದುವನ್ನು ತಿಳಿಸುವ ಸರ್ವೋತ್ತಮ ಸಂಸ್ಕೃತ ಸಾಹಿತ್ಯ.

ವೇದಗಳನ್ನು ಪ್ರಭುಸಂಹಿತೆ ಎಂದು ಕರೆಯ ಲಾಗಿದೆ. ಪ್ರಭುವಾದ ಪರಮಾತ್ಮನ ಆಜ್ಞೆ ಯಾದ ವೇದವು ಅನಾದ್ಯಂತವಾಗಿದ್ದರೂ, ಪ್ರಪಂಚದ ಸೃಷ್ಟಿಕಾಲದಲ್ಲಿ, ಚತುರ್ಮುಖನ ನಾಲ್ಕು ಮುಖಗಳಿಂದ ನಾಲ್ಕುವೇದಗಳು ಹೊರಟು ಬಂದವು. ಇವು ಪ್ರಳಯಕಾಲದಲ್ಲಿ ಪರಮಾತ್ಮ ನಲ್ಲಿ ಲೀನವಾಗಿದ್ದವು. ಸೃಷ್ಟಿಯ ಆರಂಭದಲ್ಲಿ ಧ್ಯಾನಮಗ್ನನಾಗಿದ್ದ ಬ್ರಹ್ಮನಿಗೆ, ಪರಮಾತ್ಮ ಸಂಕಲ್ಪದಂತೆ ವೇದಗಳು ಸ್ಫುರಿಸುತ್ತವೆ. ಧ್ಯಾನ ಮುಗಿದ ಮೇಲೆ ಬ್ರಹ್ಮನ ನಾಲ್ಕು ಮುಖಗಳಿಂದ ಉಸಿರರೂಪದಲ್ಲಿ ವೇದಗಳು ಪ್ರಪಂಚಕ್ಕೆ ಬರುತ್ತವೆ. ಅವನ ಪೂರ್ವಮುಖದಿಂದ ಋಗ್ವೇದವೂ, ದಕ್ಷಿಣಮುಖದಿಂದ ಯಜುರ್ವೇದವೂ ಪಶ್ಚಿಮಮುಖದಿಂದ ಸಾಮವೇದವೂ ಉತ್ತರ ಮುಖದಿಂದ ಅಥರ್ವವೇದವೂ ಬರುತ್ತವೆ. ಇದನ್ನು ಭಾರತದ ಎಲ್ಲ ದಾರ್ಶನಿಕರೂ ಅಂಗೀಕರಿ ಸಿದ್ದಾರೆ.

ಹೀಗೆ ಉಸಿರು ರೂಪದಲ್ಲಿ ಬಂದ ವೇದಗಳು ಆಕಾಶದಲ್ಲಿ ಅವ್ಯಕ್ತ ಶಬ್ದಮಯವಾಗಿದ್ದುವು. ಋಷಿಗಳು ತಮ್ಮ ತಪಶ್ಶಕ್ತಿ, ಮತ್ತು ಯೋಗ ಮಹಿಮೆಯಿಂದ ಅವನ್ನು ಕಂಡುಹಿಡಿದರು. ಋಷಿ ಎಂಬ ಶಬ್ದಕ್ಕೆ ಮಂತ್ರಗಳನ್ನು ಕಂಡು ಹಿಡಿದವರು, ಎಂದು ಅರ್ಥ. ಹೀಗೆ ಕಂಡು ಹಿಡಿದ ಮಂತ್ರ ಗಳನ್ನು ಅವರು, ತಮ್ಮ ಮಕ್ಕಳಿಗೂ, ಶಿಷ್ಯರಿಗೂ ಹೇಳಿಕೊಟ್ಟರು.. ಈ ರೀತಿ ಶಿಷ್ಯ ಪ್ರಶಿಷ್ಯರ ಮೂಲಕ ಭಾರತಭೂಮಿಯ ಎಲ್ಲಕಡೆಗೆ ಇವು ಹರಿದು ಬಂದು, ಶ್ರೌತ, ಸ್ಮಾರ್ತ, ನಿತ್ಯ ನೈಮಿತ್ತಿಕ ಕರ್ಮ, ಯಜ್ಞಯಾಗಾದಿ ಉಪಾಸನೆಗಳಲ್ಲಿ ಬಳಕೆಗೆ ಬಂದವು. ಈ ಮಂತ್ರ ಸಮುದಾಯದಲ್ಲಿ ಯಾವುದನ್ನು ಕಲಿಸುವುದು ? ಯಾವುದನ್ನು ಬಿಡುವುದು ಎಂದು ನಿಶ್ಚಯಮಾಡುವುದು ಕಷ್ಟ ವಾಯಿತು. ಇವನ್ನು ಕಲಿತು ಅಧ್ಯಯನ ಮಾಡುವುದಕ್ಕೆ ಅನುಕೂಲವಾಗುವಂತೆ ಭಗವಾನ್ ವ್ಯಾಸರು, ವೇದರಾಶಿಯನ್ನು ವಿಭಾಗಿಸಿ, ವ್ಯವಸ್ಥೆ ಪಡಿಸಿದರು. ಆದುದರಿಂದ ಇವರಿಗೆ ಕೃಷ್ಣದ್ವೈ– ಪಾಯನ ಎಂಬ ಹೆಸರು ರೂಢಿಯಲ್ಲಿ ಬಂದಿತು.

ಶಬ್ದಾರಾಧಕರಾದ ಋಷಿಗಳು ಯೋಗಿಗಳು ತಮ್ಮ ಕಿವಿಗಳನ್ನು ಮುಚ್ಚಿಕೊಂಡು ಧ್ಯಾನಮಗ್ನ ರಾದಾಗ, ಅವರಿಗೆ ಅನಾಹತವಾದ ನಾದವು ಕೇಳಿಬರುವುದು. ಇಂತಹ ನಾದ ಅವ್ಯಕ್ತ ಪ್ರಣವ ಎನ್ನಿಸಿಕೊಳ್ಳುವುದು. ಈ ಓಂಕಾರದಿಂದ ಗಾಯತ್ರಿಯೂ, ಗಾಯತ್ರಿಯಿಂದ ಸಮಸ್ತ ವೇದ ಗಳೂ ಅಭಿವ್ಯಕ್ತವಾಗುವುವೆಂದು ಶಾಸ್ತ್ರಕಾರರು

ಶ್ರೀ ಡಿ. ಕೃಷ್ಣಅಯ್ಯಂಗಾರ್

ತಿಳಿಸುತ್ತಾರೆ. ಇಂತಹ ಅನಾಹತನಾದವು ದೀರ್ಘಕಾಲದವರೆಗೆ ಅನುಸಂಧಾನಪೂರ್ವಕ ಧ್ಯಾನಮಗ್ನವಾಗಿದ್ದ ಅವರ ಹೃದಯಾಂತರಾಳ ದಲ್ಲಿ ವೇದಗಳು ಗೋಚರವಾದುವು. ಸೃಷ್ಟಿಗೆ ಆರಂ ಭದಲ್ಲಿ ಬ್ರಹ್ಮನು ಬಹುಕಾಲ ಧ್ಯಾನಾಸಕ್ತ ನಾಗಿದ್ದಾಗ ಕೊನೆಗೆ ಅವನ ಹೃದಯಾಂತರಾಳ ದಲ್ಲಿ ಪರಮಾತ್ಮನ ಉಸಿರಿಂದ ವೇದವೇ ಮೊಳಗಿ ಕೇಳಿಸಿತು. ಅನಂತರ ಅವು ಅಭಿವ್ಯಕ್ತವಾಗಿ ಆಕಾಶದಲ್ಲಿ ಉಳಿದವು. ಋಷಿಗಳು ತಮ್ಮ ತಪೋ ಮಹಿಮೆಯಿಂದ ಅವನ್ನು ಶೇಖರಿಸಿ, ಪ್ರತ್ಯಕ್ಷೀ ಕರಿಸಿದರು. ಆದುದರಿಂದಲೇ ವೇದಕ್ಕೆ ಶ್ರುತಿ ಎಂಬ ಹೆಸರು ರೂಢಿಯಲ್ಲಿ ಬರುವುದಕ್ಕೆ ಕಾರಣ ವಾಗಿದೆ.

ಈ ಸಂದರ್ಭದಲ್ಲಿ ಇಂದಿನ ವಿಜ್ಞಾನಪರಿಶೀಲನ ಪ್ರಯೋಗಗಳಾದ ಆಕಾಶವಾಣಿ, ದೂರದರ್ಶನ ಗಳನ್ನು ಇಲ್ಲಿ ಸ್ಮರಿಸಬಹುದು. ಸಾವಿರಾರು ಮೈಲಿ ದೂರದಲ್ಲಿ ನಡೆಯುತ್ತಿರುವ ದೃಶ್ಯ, ಮತ್ತು ನುಡಿಯುತ್ತಿರುವ ಮಾತುಗಳನ್ನು ಏಕಕಾಲದಲ್ಲಿ ನಾವು ಪ್ರತ್ಯಕ್ಷದಲ್ಲಿ ನೋಡಿ ಕೇಳುತ್ತಿರುವಾಗ, ಆಕಾಶದಲ್ಲಿ ಸಂಚರಿಸುತ್ತಿದ್ದ ಶಬ್ದರಾಶಿಯನ್ನು ಋಷಿಗಳು ತಮ್ಮ ಯೋಗಮಹಿಮೆಯಿಂದ ಕಂಡು ಹಿಡಿದು ಶಿಷ್ಯ ಪ್ರಶಿಷ್ಯರ ಮೂಲಕ ಪ್ರಚಾರದಲ್ಲಿ ತಂದರು ಎಂದು ನಂಬುವುದಕ್ಕೆ ಅಡ್ಡಿಯೇನಿದೆ ? ಇದನ್ನು ಪರಮಾತ್ಮ ಸಂಕಲ್ಪ ಎನ್ನುತ್ತೇವೆ. ಆದರೆ ಆಕಾಶವಾಣಿ ದೂರದರ್ಶನಗಳನ್ನು ವಿಜ್ಞಾನ, ಪರಿಶೀಲನಾಸಾಮರ್ಥ್ಯದ ಫಲ ಎನ್ನುತ್ತವೆ. ಆದರೂ ಇವು ಪರಮಾತ್ಮ ಸಂಕಲ್ಪಕ್ಕೆ ಹೊರ ಗಿನದೇನೂ ಅಲ್ಲ.

ಶಬ್ದಪ್ರಮಾಣವಾದ ವೇದದಲ್ಲಿ ಎರಡು ಭಾಗ ಗಳಿವೆ. ಕರ್ಮವನ್ನು ಪ್ರತಿಪಾದಿಸುವ ಪೂರ್ವಭಾಗ, ಮತ್ತು ಬ್ರಹ್ಮವನ್ನು ಪ್ರತಿಪಾದಿಸುವ ಉತ್ತರ ಭಾಗ. ಬ್ರಹ್ಮ ವಸ್ತುವಿನ ಆರಾಧನಾರೂಪವಾದ ಕರ್ಮವನ್ನು ಪ್ರತಿಪಾದಿಸುವುದು ಪೂರ್ವಕಾಂಡ. ಆರಾಧನಾವಿಷಯವಾದ ಬ್ರಹ್ಮವನ್ನು ಪ್ರತಿಪಾದಿ ಸುವುದು ಉತ್ತರಕಾಂಡ. ಇವೆರಡೂ ಸೇರಿ ಒಂದು ಶಾಸ್ತ್ರವಾಗಿದೆ. ಬೋಧಾಯನ ಸೂತ್ರವೃತ್ತಿ ಕಾರರಂತೆ ಇವನ್ನು ಪೂರ್ವಮೀಮಾಂಸೆ, ಉತ್ತರ ಮೀಮಾಂಸೆ ಎಂದು ಕರೆಯಲಾಗಿದೆ. ಈ ಎರಡುಭಾಗ ಹೊಂದಿರುವ ವೇದವು ಋಕ್ಕು, ಯಜಸ್ಸು, ಸಾಮ, ಅಥರ್ವ ಎಂದು ನಾಲ್ಕು ಪ್ರಾಕಾರಗಳಾಗಿವೆ. ಅಲ್ಲದೆ, ಇವು ಮಂತ್ರ ಯುಕ್ತವಾಗಿಯೂ ಇವೆ. ಮತ್ತು ವಿಧಿನಿಷೇಧ



ಓಂ ಶ್ರೀ ಮಾತ್ರೇ ನಮಃ

ದೂರವಾಣಿ : 81201

# ನವಶಕ್ತಿ ನಿಲಯದವರಿಂದ ಭಕ್ತರಿಗೆ ವಿಶಿಷ್ಟವಾದ ಕೊಡುಗೆ

ಶ್ರೀ ಕಂಚಿ ಕಾಮಕೋಟಿ ಶ್ರೀ ಜಯೇಂದ್ರ ಸರಸ್ವತಿಸ್ವಾಮಿಗಳು, ಶ್ರೀ ತಿರುಮುರುಗ ಕೃಪಾ ನಂದ ವಾರಿಯಾರ್ ಮೊದಲಾದ ಜಗದ್ಗುರು ಹಾಗೂ ಸಂತರಿಂದ ಆಶೀರ್ವದಿಸಲ್ಪಟ್ಟ ದೈವಿ ವಸ್ತುಗಳ ತಯಾರಕರು.

1. ಶ್ರೀ ಮಹಾಮೇರು ಪಂಚಲೋಹ ಬೆಲೆ
   16 × 16, 10 × 10, 4½ × 4½
   6 × 6 (ಬೇಡಿಕೆಯ ಮೇರೆಗೆ)
2. ಶ್ರೀಚಕ್ರ (8 × 8) ರೂ. 125
3. ಮಹಾಲಕ್ಷ್ಮಿ ಮಹಾಯಂತ್ರ 24 × 24 " 1000
4. ಮಹಾಸರಸ್ವತಿ " 125
5. ಅಷ್ಟಲಕ್ಷ್ಮಿ ಯಂತ್ರ " 125
6. ಪರಶಿವ ಯಂತ್ರ " 125
7. ಭವಾನಿ " 125
8. ಚಿದಂಬರಮ್ " 125
9. ದಕ್ಷಿಣಾಮೂರ್ತಿ " 125
10. ಅರ್ಧನಾರೀಶ್ವರ " 125
11. ಅನ್ನಪೂರ್ಣೆ " 125
12. ನಂದಿ " 125
13. ಸುಬ್ರಹ್ಮಣ್ಯ " 125
14. ವಳ್ಳಿ " 125
15. ದೇವಸೇನಾ " 125
16. ವಳ್ಳಿದೇವಸೇನಾ ಸಹಿತ ಸುಬ್ರಹ್ಮಣ್ಯ " 125
17. ದಂಡಾಯುಧಪಾಣಿ " 125
18. ಮಹಾವಿಷ್ಣು " 125
19. ಶ್ರೀದೇವಿ " 125
20. ಭೂದೇವಿ " 125
21. ಮಹಾಸುದರ್ಶನ (16 × 16 C.M.) " 500
22. ಸುದರ್ಶನ " 125
23. ಶ್ರೀನಿವಾಸ " 125
24. ನರಸಿಂಹ " 125
25. ಗರುಡ " 125
26. ನಟರಾಜ ರೂ 125
27. ತ್ಯಾಗರಾಜ " 125
28. ಚಂಡಿಕೇಶ್ವರ " 125
29. ಶ್ಯಾಮಲಾ " 125
30. ಭುವನೇಶ್ವರಿ " 125
31. ಸಪ್ತಸತಿ ಯಂತ್ರ 24 × 24 " 1000
32. ಸಪ್ತ ಮಾತೃಕೆ " 125
33. ಚಾಮುಂಡೇಶ್ವರಿ " 125
34. ನವಾಕ್ಷರಿ " 125
35. ಮಹಾದುರ್ಗೆ 24 × 24 C.M. " 1000
36. ವನದುರ್ಗೆ 16 × 16 C.M. " 500
37. ಶಾಂತಿದುರ್ಗೆ 16 × 16 C.M. " 500
38. 4ಕೈ ಶಿವದುರ್ಗೆ 16 × 16 CM. " 500
39. 4ಕೈ ವಿಷ್ಣುದುರ್ಗೆ 16 × 16 C.M. " 500
40. 8ಕೈ ದುರ್ಗೆ (ಮಹಾಸರಸ್ವತಿ) " 500
41. 18ಕೈ ದುರ್ಗೆ (ಮಹಾಲಕ್ಷ್ಮಿ) 24 × 24 C. M. " 1000
42. ಕಾಳಿಯಮ್ಮ " 125
43. ಮಾರಿಯಮ್ಮ " 125
44. ಬಾಲಾತ್ರಿಪುರಸುಂದರಿ " 125
45. ಮಹಾಗಣಪತಿ " 125
46. ಶರಭೇಶ್ವರ 18 × 18 C.M. ಮೂರೂ
47. ಶೂಲಿನಿ " ಸೇರಿ
48. ಪ್ರತ್ಯಂಗಿರ " 1000
49. ಧನ್ವಂತ್ರಿ " 125
50. ಹಯಗ್ರೀವ " 125
51. ಕೃಷ್ಣ " 125
52. ಸ್ವಯಂವರ " 125
53. ಇಂದ್ರಾಕ್ಷಿ ರೂ 12
54. ಇಂದ್ರಾಣಿ " 12
55. ಕಾರ್ತವೀರ್ಯಾರ್ಜುನ " 12
56. ಸಾರ್ವಭೌಮ " 12
57. ಮತ್ಸ್ಯಯಂತ್ರ " 12
58. ಧನ ಆಕರ್ಷಣ " 12
59. ಸರ್ವಧನ, ಮನ, ಜನ ಆಕರ್ಷಣ ಯಂತ್ರ 16 × 16CM " 50
60. ಮಹಾಶಾಸ್ತ 16 × 16 C.M. " 50
61. ಸಂತಾನ ಗೋಪಾಲ " 12
62. ನವಗ್ರಹಯಂತ್ರ (9ಭಾಗ) " 50
63. ದ್ವಾರಪಾಲಕ (ಮೂಂಡಿ) " 12
64. ದ್ವಾರಪಾಲಕ (ದಂಡಿ) " 12
65. ಪಿಡಾರಿ " 12
66. ಕಂಬತ್ ಆಳ್ವಾರ್ " 12
67. ಸಿಂಹ (ಸಾಧಾರಣ) " 12
68. ಕ್ಷೇತ್ರಪಾಲ " 12
69. ವೀರಭದ್ರ " 12
70. ವಡುಗಭೈರವ " 12
71. ಉಗ್ರಭೈರವ " 12
72. ತ್ರಯಂಬಕ " 12
73. ಸ್ವರ್ಣ ಆಕರ್ಷಣಭೈರವ " 12
74. ಶಂಕರನಾರಾಯಣ " 12
75. ದುರ್ಗೆ (ಸಾರ್ಥಪ್ರಮೋದ) " 12
76. ಭದ್ರಕಾಳಿ " 12
77. ಪಂಚಮುಖ ಗಣಪತಿ " 12
78. ಪಂಚಮುಖ ಹನುಮಾನ್ " 12
79. ದಶಮಹಾವಿದ್ಯಾ (ಹತ್ತು ವಿವಿಧ ಯಂತ್ರಗಳು—ಪ್ರತಿಯೊಂದು) " 12

* * * *

ದೇವಾಲಯಗಳಿಗೆ ಹಾಗೂ ಮನೆಗಳಿಗೆ ಬೇಕಾದ ಎಲ್ಲ ಯಂತ್ರಗಳೂ ದೊರೆಯುತ್ತವೆ. ಬೇಡಿಕೆಗೆ ತಕ್ಕಂತೆ ಕರಿಕಲ್ಲಿನ ವಿಗ್ರಹಗಳು ದೊ ಯುತ್ತವೆ. ಉಚಿತ ಕ್ಯಾಟಲಾಗಿಗಾಗಿ ಕೆಳಗಣ ವಿಳಾಸಕ್ಕೆ 50 ಪೈಸೆ ಅಂಚೆ ಚೀಟಿಯನ್ನು ಇಟ್ಟು ಬರೆಯಿರಿ. ವಿದೇಶೀ ಆರ್ಡರುಗಳಿಗೆ 25% ಅಧಿಕ.

ದಯವಿಟ್ಟು ಬರೆಯಿರಿ (ಇಂಗ್ಲೀಷಿನಲ್ಲಿ ಮಾತ್ರ) :


ವಿಶ್ವಕರ್ಮಜ್ಞ ಶ್ರೀ ವಿದ್ಯಾ ಉಪಾಸ

**ಸ್ವಾಮಿಜೀ ಶ್ರೀ ಎಸ್. ಟಿ. ಮುರುಗಭೂಷಣ**

ಅಧ್ಯಕ್ಷರು ನವಶಕ್ತಿ ನಿಲ

153, ಲಾಯ್ಡ್ಸ್ ರೋಡ್, ಗೋಪಾಲಪುರ

ಮದರಾಸು — 600086

ಮಂತ್ರಗಳನ್ನೂ ಒಳಗೊಂಡಿದೆ. ಇವು ಛಂದಸ್ಸು, ಕಲ್ಪ, ಶಿಕ್ಷೆ, ನಿರುಕ್ತ, ಜ್ಯೋತಿಷ್ಯ ವ್ಯಾಕರಣ ಎಂದು ಆರು ವಿಧವಾಗಿವೆ.

ಹೀಗೆ ಶಬ್ದಪ್ರಾಮಾಣ್ಯವನ್ನು ಬೋಧಿಸುವ ಪಕ್ಕೆ-ಹೊರಟಿರುವ ವೇದವಾಕ್ಯಗಳಲ್ಲಿ ಭೇದಶ್ರುತಿ, ಅಭೇದಶ್ರುತಿ, ನಿರ್ವಿಕಾರಶ್ರುತಿ, ನಿರ್ಗುಣಶ್ರುತಿ, ತತ್ತ್ವಫಲಶ್ರುತಿ ಎಂದು ಸ್ಥೂಲವಾಗಿ ವಿಂಗಡಿಸಲಾಗಿದೆ. ಹೀಗೆ ಸತ್ಕುಲ ಪ್ರಸೂತೆಯರಾಗಿರುವ ಶ್ರುತಿಕನ್ಯೆಯರು ಪರಸ್ಪರ ಪ್ರೀತಿಯಿಂದ, ಪರತತ್ತ್ವವಾದ ಶ್ರೀಮನ್ನಾರಾಯಣನೇ ಅಪ್ರಮತ್ತನಾಗಿಯೂ, ಸರ್ವತೋಮುಖನಾಗಿಯೂ ಇರುವ ಅವನ ವೈಭವವನ್ನು ಉದ್ಘೋಷಿಸುವುದರಿಂದ ಇವೆಲ್ಲವೂ ಶಬ್ದಪ್ರಮಾಣ ಎಂಬುದರಲ್ಲಿ ಸಂದೇಹವಿಲ್ಲ.

ವಿಶ್ವಸ್ಯ ವಿಶ್ವವಿಧ ಕಾರಣ ಮುಖ್ಯತತ್ತ್ವಂ
ಕಾರ್ಯಂ ತದೇತದಖಿಲಂ ಚಿದಚಿತ್ಸ್ವರೂಪಂ ।
ತ್ವಂ ನಿರ್ವಿಕಾರ ಇತಿ ವೇದಶಿರಸ್ಸು ಘೋಷಃ
ನಿಸ್ಸೀಮಮೇವ ತವದರ್ಶಯಿತೀಶಿತೃತ್ವಂ ॥

ವೇದ ವಾಙ್ಮಯದ ಉತ್ತುಂಗ ಶಿಖರಗಳಾಗಿರುವ ಉಪನಿಷತ್ತುಗಳು ಆರಣ್ಯಕಗಳೊಡನೆ ಮಿಳಿತವಾಗಿ ವೇದಗಳ ಭಾಗಗಳಾಗಿವೆ. ಸಾರತಮ ಸಿದ್ಧಾಂತಗಳನ್ನು ಪ್ರತಿಪಾದಿಸುವ ಈ ಭಾಗವು ಉತ್ತಮ ಶಬ್ದಪ್ರಮಾಣವಾಗಿದೆ. ತತ್ತ್ವಜ್ಞಾನವನ್ನೂ ಮತ್ತು ವೈದಿಕ ಧರ್ಮವನ್ನೂ ಬೋಧಿಸುವ ಪ್ರಸ್ಥಾನತ್ರಯಗಳಲ್ಲಿ ಉಪನಿಷತ್ತಿಗೆ ಪ್ರಮುಖಸ್ಥಾನವಿದೆ. ಭಾರತೀಯ ದರ್ಶನಗಳಿಗೆ ಉಪನಿಷತ್ತುಗಳು ಪ್ರತ್ಯಕ್ಷವಾಗಿ, ಅಥವಾ ಪರೋಕ್ಷವಾಗಿ ಆಧಾರವಾಗಿರುವುದಲ್ಲದೆ, ತತ್ತ್ವದೃಷ್ಟಿಯಿಂದ ಮತ್ತು ಸಾಹಿತ್ಯದೃಷ್ಟಿಯಿಂದ ಬಹು ಸುಂದರವೂ, ಆಕರ್ಷಯುತವೂ ಆಗಿವೆ. ವಿಶ್ವ ಸಾಹಿತ್ಯದಲ್ಲಿ ಕೂಡ ಉಪನಿಷತ್ತುಗಳಿಗೆ ಉತ್ತಮ ಸ್ಥಾನವಿದೆ.

ಉಪನಿಷತ್ತುಗಳಲ್ಲಿರುವ ವಿಷಯವೇನು? ಇಲ್ಲಿರುವುದು ಸತ್ಯದ ಅನ್ವೇಷಣೆಯೇ? ಜಗತ್ಕಾರಣ ವಸ್ತುಯಾವುದು? ನಾವು ಎಲ್ಲಿಂದ ಬಂದೆವು? ಯಾವ ನಿಯಮಕ್ಕೆ ಒಳಗಾಗಿ ಇಲ್ಲಿಯ ಸುಖದುಃಖಗಳನ್ನು ಅನುಭವಿಸುತ್ತ ಕೊಳಲುತ್ತಿರುವೆವು? ಇವೇ ಮುಂತಾದ ಪ್ರಶ್ನೆಗಳಿಗೆ ಉಪನಿಷತ್ತುಗಳು ಸೂಕ್ತವಾದ ಉತ್ತರಗಳನ್ನು ನೀಡುತ್ತವೆ. ಆದುದರಿಂದ ಉಪನಿಷತ್ತುಗಳು ಉತ್ತಮ ಶಬ್ದಪ್ರಮಾಣಗಳು.

ಕಿಂ ಕಾರಣಂ ಬ್ರಹ್ಮ ಕುತಸ್ಮಜಾತಾ
ಜೀವಾಮ ಕೇನ ಕ್ವಚಸಂಪ್ರತಿಷ್ಠಾ ।
ಅಧಿಷ್ಠಿತಾಃ ಕೇನ ಸುಖೇತರೇಷು
ವರ್ತಾಮಹೇ ಬ್ರಹ್ಮವಿದೋ ವ್ಯವಸ್ಥಾಂ ॥

ಎಂದು ಶ್ವೇತಾಶ್ವತರ ಉಪನಿಷತ್ತು ತಿಳಿಸುತ್ತದೆ.

ಉಪನಿಷತ್ತುಗಳು ಆತ್ಮಸಾಕ್ಷಾತ್ಕಾರಕ್ಕೆ ಮೊದಲನೆಯ ಹಂತವಾಗಿ ಅಂತಃಶುದ್ಧಿಯನ್ನು ವಿಧಿಸುತ್ತವೆ. ಆಸೆ, ದ್ವೇಷ, ಕೋಪ, ಮದ, ಮತ್ಸರ ಇತ್ಯಾದಿಗಳನ್ನು ನಿರ್ಮೂಲನಮಾಡಿ ಮನಸ್ಸನ್ನು ಶುದ್ಧಿಗೊಳಿಸಬೇಕೆಂಬುದು ಅವುಗಳ ಉಪದೇಶ. ಇಂದ್ರಿಯ ಜಯವನ್ನು ಸಂಪಾದಿಸಿ ಸಿದ್ಧಿ ಪಡೆಯಬೇಕು. ದುಶ್ಚರಿತದಿಂದ ದೂರವಾಗಬೇಕು. ಅಶಾಂತನೂ, ಅಸಮಾಹಿತನೂ ಆದವನು ಆತ್ಮಸಾಕ್ಷಾತ್ಕಾರ ಪಡೆಯಲಾರನು. ಸತ್ಯ, ಧರ್ಮ, ನೀತಿಗಳಿಗೆ ಉಪನಿಷತ್ತಿನಲ್ಲಿ ಪ್ರಾಧಾನ್ಯ ಇದೆ. ಮಾನವ ಕರ್ತವ್ಯವನ್ನು ಅವು ತಿಳಿಸುತ್ತವೆ. ಬೃಹದಾರಣ್ಯಕವು 'ದಾನ ಮಾಡು, ಇಂದ್ರಿಯಗಳನ್ನು ನಿಗ್ರಹಿಸು, ದಯೆ ತೋರು' ಎಂದು ಪ್ರಭಾವಶಾಲಿ ಮಾತಿನಲ್ಲಿ ತಿಳಿಸುತ್ತದೆ. ತೈತ್ತಿರೀಯ ಉಪನಿಷತ್ತು 'ಶ್ರದ್ಧೆಯಿಂದ ಕೊಡು, ಅಶ್ರದ್ಧೆಯಿಂದ ಕೊಡಬೇಡ ಹೆಚ್ಚಾಗಿಕೊಡು' ಎನ್ನುವುದು. ಹೀಗೆ ಉಪನಿಷತ್ತುಗಳು ಸರ್ವಸಾಮಾನ್ಯವಾಗಿ ಸರಳವೂ, ಸುಂದರವೂ ಆಗಿವೆ. ಸ್ಫೂರ್ತಿದಾಯಕವಾಗಿವೆ. ಅಜ್ಞಾನದ ಕತ್ತಲೆಯಲ್ಲಿರುವ ಮಾನವನಿಗೆ ಉಜ್ವಲ ಕಾಂತಿಯನ್ನು ಚೆಲ್ಲುವ ರತ್ನದೀಪಗಳಾಗಿವೆ. ಇವೆಲ್ಲ ಉತ್ತಮ ಶಬ್ದಪ್ರಮಾಣಗಳು.

ವೇದಗಳಂತೆಯೇ ವೇದಾಂಗಗಳಾದ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಕಲ್ಪ ಮತ್ತು ಜ್ಯೋತಿಷ್ಯ ಇವು ಉತ್ತಮ ಶಬ್ದಪ್ರಮಾಣಗಳು. ಹಾಗೆಯೇ ಇತಿಹಾಸ ಪುರಾಣಗಳೂ ಶಬ್ದಪ್ರಮಾಣಗಳು. ಏಕೆಂದರೆ ಇವು ವೇದಾರ್ಥವಿವರಣಕ್ಕೆ ಪ್ರತ್ಯಕ್ಷ ನಿದರ್ಶನಗಳಾಗಿವೆ. ಆಗಮ, ದಿವ್ಯ, ತಂತ್ರ ಮತ್ತು ತತ್ರಾಂತರ ಸಿದ್ಧಾಂತಗಳನ್ನೊಳಗೊಂಡ ಪಾಂಚರಾತ್ರಾಗಮವು ವೇದಕ್ಕೆ ವಿರೋಧವಾಗಿಲ್ಲದಿರುವುದರಿಂದ ಶಬ್ದಪ್ರಮಾಣಗಳು. ಹಾಗೆಯೇ ಶಾಂಡಿಲ್ಯ, ಪರಾಶರ ಭಾರದ್ವಾಜ, ವಸಿಷ್ಠ, ಹಾರೀತ, ಯಾಜ್ಞವಲ್ಕ್ಯ, ಆಪಸ್ತಂಭ, ಗೌತಮ, – ಪ್ರಣೀತ ಧರ್ಮಶಾಸ್ತ್ರಗಳೂ, ಶಿಲ್ಪ, ಆಯುರ್ವೇದ, ಗಾಂಧರ್ವ, ಭರತನಾಟ್ಯ – ಇತ್ಯಾದಿಗಳಲ್ಲಿರುವ ಉಪಯುಕ್ತಾಂಶಗಳೂ ಶಬ್ದಪ್ರಮಾಣಗಳು. ಹೀಗೆ ಅರವತ್ತು ನಾಲ್ಕು ಕಲೆಗಳ ರೂಪದಲ್ಲಿರುವ ಯಾವ ಭಾಗಗಳು ತತ್ತ್ವ ಹಿತ, ಪುರುಷಾರ್ಥಗಳಿಗೆ ಸಂಬಂಧಿಸಿದಂತೆ, ಉಪಯುಕ್ತವಾಗಿರುವುವೋ ಅವೆಲ್ಲವೂ ಶಬ್ದಪ್ರಮಾಣಗಳಾಗಿವೆ.

ಪರಾಂಕುಶ, ಪರಕಾಲಾದಿ ದಿವ್ಯಸೂರಿಗಳ ದಿವ್ಯ ಪ್ರಬಂಧಗಳು, ಯಾವದೋಷವೂ ಇಲ್ಲದೆ ಪೌರುಷೇಯವಾಗಿದ್ದರೂ, ಅಪೌರುಷೇಯ ವೇದದಂತೆ ಪೂರ್ಣವಾಗಿ ಶಬ್ದಾರ್ಥಗಳನ್ನೊಳಗೊಂಡಿವೆ. ಪರಮ ಕಾರುಣಿಕನಾದ ಪರಮಾತ್ಮನು, ಚೇತನರ ಉದ್ಧಾರಕ್ಕಾಗಿ ತನ್ನ ದಿವ್ಯಾಯುಧ, ದಿವ್ಯಭೂಷಣಗಳನ್ನು ಆಳ್ವಾರರುಗಳಾಗಿ ಅವತರಿಸುವಂತೆ ಕೃಪೆಮಾಡಿ, ಅವರಿಗೆ ದಿವ್ಯಜ್ಞಾನವನ್ನು ಅನುಗ್ರಹಿಸಿ ಅವರ ಹೃದಯದಲ್ಲಿ ನೆಲೆಸಿ ಭಗವದನುಭವಪರೀವಾಹರೂಪವಾದ ದಿವ್ಯಪ್ರಬಂಧಗಳನ್ನು ಅವರ ಮೂಲಕ ಪ್ರಚುರಪಡಿಸಿದನು. ಇವು ದ್ರಾವಿಡವೇದ ಎಂದು ಪ್ರಸಿದ್ಧವಾಗಿವೆ. ಇವು ಉಪನಿಷತ್ತಿನ ಸಾರಸಂಗ್ರಹವಾಗಿವೆ. ಇವು ಭಗವತ್ಪ್ರತಿಪಾದನೆಗೆ ಉತ್ತಮ ಸಾಧನವಾಗಿದೆ. ಇವು ಶಬ್ದಪ್ರಮಾಣವಾಗಿ ಸರ್ವ ಪರಿಗ್ರಾಹ್ಯಗಳಾಗಿವೆ.

ಹಾಗೆಯೇ ಪೂರ್ವಾಚಾರ್ಯ ಮಹಾತ್ಮರು ರಚಿಸಿರುವ ಪ್ರಸ್ಥಾನತ್ರಯಗಳು, ಶಬ್ದಪ್ರಮಾಣಗಳು, ಆಕಾಂಕ್ಷೆ, ಯೋಗ್ಯತೆ ಮತ್ತು ಸನ್ನಿಧಿ ಇತ್ಯಾದಿ ಲಕ್ಷಣಗಳಿಂದ ಕೂಡಿದ ವೇದಾಂತ ವಾಕ್ಯಗಳು ಶಬ್ದಪ್ರಮಾಣಗಳು. ಒಂದು ವಾಕ್ಯದ ಪ್ರಾಮಾಣ್ಯವನ್ನು ಮೂರು ಅಂಶಗಳು ಸಿದ್ಧಸುತ್ತವೆ. "ಗೌಃ" ಎಂದರೆ ಅರ್ಥ ಪೂರ್ಣವಾಗದು. ಇತರ ಅಂಶಗಳ ಅಪೇಕ್ಷೆ ಇದೆ. ಇದು ಆಕಾಂಕ್ಷೆ. ಹೇಳಿದ ಶಬ್ದ ಅರ್ಥವಾಗುವಂತಿರಬೇಕು, ಇದು ಯೋಗ್ಯತೆ. ಪದಗಳನ್ನು ಉಚ್ಚರಿಸುವುದರಲ್ಲಿ ದೀರ್ಘವಾದ ಅಂತರವಿರುವುದಾದರೆ ಸನ್ನಿಧಿ ಇರುವುದಿಲ್ಲ. ಶಬ್ದಜ್ಞಾನವುಂಟಾಗುವುದಕ್ಕೆ ಸನ್ನಿಧಿ ಅಗತ್ಯ 'ದೇವರ ಧ್ಯಾನಮಾಡು' ಎಂದು ಶಬ್ದಗಳನ್ನು ಒಟ್ಟಿಗೆ ಹೇಳುವುದರಿಂದ ಅರ್ಥಪೂರ್ಣವಾಗುವುದು.

ಶರೀರವನ್ನು ಕುರಿತು ಹೇಳುವ ಶಬ್ದಗಳೆಲ್ಲ ಶರೀರಕ್ಕಾಧಾರನಾದ ಆತ್ಮನನ್ನು ಹೇಳುತ್ತವೆ. ಹಾಗೆಯೇ ಚೇತನಾಚೇತನಗಳನ್ನು ಹೇಳುವ ಶಬ್ದಗಳು, ಪರಮಾತ್ಮನಿಗೆ ಶರೀರವಾದ ಪ್ರಕೃತಿ, ಕಾಲ, ಆಕಾಶ, ಪ್ರಾಣ–ಇತ್ಯಾದಿ ಅನೇಕ ಪದಾರ್ಥಗಳನ್ನು ಹೇಳುವ ಶಬ್ದಗಳಾಗಿವೆ. ಇವುಗಳೆಲ್ಲಕ್ಕೂ ಮೂಲವಾದ ಶ್ರೀಮನ್ನಾರಾಯಣನನ್ನೇ ಬೋಧಿಸುವುದರಲ್ಲಿ ಪರ್ಯವಸಾನವಾಗುತ್ತವೆ. ವೇದಾಂತಜ್ಞಾನದಿಂದ ಶಬ್ದಾರ್ಥಜ್ಞಾನವು ಪರಿಪೂರ್ಣವಾಗುವುದೆಂದು ಶಬ್ದಪ್ರಮಾಣ ತಿಳಿಸುತ್ತದೆ. ಇದನ್ನು 'ವೈದಿಕಾಃ ಶಬ್ದಾಃ ಸರ್ವೇ ಪರಮಾತ್ಮ ಪರ್ಯಂತಾತ್ ಸ್ವಾರ್ಥಾನ್ ಬೋಧಯಂತಿ' ಎಂದು ರಾಮಾನುಜರು ಪ್ರತಿಪಾದಿಸಿದ್ದಾರೆ.

ಹೀಗೆ ಶ್ರೀಮನ್ನಾರಾಯಣನೇ ಸರ್ವ ಶಬ್ದವಾಚ್ಯನೆಂದೂ ಸರ್ವವನ್ನೂ ಶರೀರವಾಗಿ ಹೊಂದಿರುವನೆಂದೂ, ಶಬ್ದಪ್ರಮಾಣವು ವೇದಾಂತ ಶಾಸ್ತ್ರದ ಅಗತ್ಯಭಾಗವಾಗಿದೆ.

# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ 'ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ. ತೆಲುಗು. ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನು ಹೊಂದಿ ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಕೆ. ವಿಜಯಕುಮಾರ್
ಭವಾನಿಶಂಕರ್ ಏಜನ್ಸಿ
ಕೆ.ಎಂ. ಹಳ್ಳಿ, ಕೂಡ್ಲಿಗಿ.

ಸಿ.ಪಿ. ರಾಮಕೃಷ್ಣ
ಜವಳಿ ವ್ಯಾಪಾರಿಗಳು
ಚಾಮರಾಜನಗರ.

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್. ಶ್ರೀಕಂಠಯ್ಯ
ಶ್ರೀನಿಧಿ ಸ್ಟೋರ್ಸ್, ಕರ್ನಾಟಕ ಸಂಘ ರಸ್ತೆ
ಜಾಲಹಳ್ಳಿ, ಬೆಂಗಳೂರು.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕ ಬಳ್ಳಾಪುರ.

ವೆಂಕಟೇಶ ಶಿವಾಜಿ ಝುಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ವಿ.ಎಸ್. ಗೋಪಾಲಕೃಷ್ಣ
ಬೃಂದಾವನ ಸ್ಟೋರ್ಸ್
10/125. 9ನೇ ಮೇನ್ 3ನೇ ಬ್ಲಾಕ್
ಜಯನಗರ, ಬೆಂಗಳೂರು.

ಕೆ.ಎಸ್. ವೆಂಕಟಾಚಲಪತಿಶೆಟ್ಟಿ
ರಮೇಶ್ ಸ್ಟೋರ್ಸ್
ಕುಣಿಗಲ್.

ಆರ್.ಜಿ. ಏಜನ್ಸಿ
ಸೋಮವಾರಪೇಟೆ
ರಾಯಚೂರು.

ಡಿ. ಗೋಪಾಲಶೆಟ್ಟಿ
ನ್ಯೂಸ್ಏಜಂಟ್
ಶಿವಾನಂದಸ್ಟೋರ್ಸ್. ಮದ್ದೂರು.

ಬಿ.ಕೆ. ವೆಂಕಟೇಶನ್
ಆಡಿಟರ್, 1759, 9ನೇ ಕ್ರಾಸ್
ತುಮಕೂರು.

ಬಿ.ಎಸಿ. ಭಟ್
ಉದಯವಾಣಿ ಏಜಂಟ್
ಕಾಳೇಶ್ವರ.

ಸುಬ್ಬಾರಾವ್
ನ್ಯೂಸ್ಏಜಂಟ್, ಆಸ್ಪತ್ರೆರಸ್ತೆ
ಮಧುಗಿರಿ.

ವೈ.ಎಸ್. ಮಲ್ಲಿಕಾರ್ಜುನ ಶೆಟ್ಟಿ
ಸ್ಟೇಟ್‌ಬ್ಯಾಂಕ್ ಆಫ್ ಮೈಸೂರ್ ಬಳಿ
ಕೂಡ್ಲಿಗಿ.

ವೆಂಕಟೇಶ್ವರ ಕಾಫಿವರ್ಕ್ಸ್, ಅಂಡ್ ಬುಕ್‌ಡಿಪೋ
ಜಯಲಕ್ಷ್ಮಿ ಬಿಲ್ಡಿಂಗ್ಸ್, 610 ಬಸ್‌ಸ್ಟಾಂಡ್ ರಸ್ತೆ
ಮಂಡ್ಯ.

ಪಿ.ಎಸ್. ನಾಗರತ್ನಮ್ಮ
W/o ಪಿ.ಸತ್ಯನಾರಾಯಣ, ನಟೇಶ್‌ಕಾಂಪೌಂಡ್ಸ್
ಬಂಗಾರಪೇಟೆ.

ಆನಂದರಾವ್. ನಿವೃತ್ತ ಉಪಾಧ್ಯಾಯರು
ಶಿವಪ್ಪ ನಾಯಕನಗರ
ಸಾಗರ.

ಎಸ್. ರತ್ನಮ್ಮ
ಸಲ್ಲಾಪುರ. ತರೀಕೆರೆ.

ಎಂ.ಎಸ್. ಕೃಷ್ಣಮೂರ್ತಿ
ಉತ್ತರಾದಿಮಠ
ಚಿತ್ರದುರ್ಗ.

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳ ಬುರುಜು ಹಿಂಭಾರದಗಸ್ತಿ
ಬಿಜಾಪುರ.

ಎಸ್. ಮೂಡಲಗಿರಿರಾಜ
S/o ಶ್ರೀ ರಂಗಶೆಟ್ಟಿ, ಸಪ್ತಗಿರಿ ನಿಲಯ
ಭರಮಸಾಗರ.

ಶ್ರೀಮತಿ ರಾಜಗುರು
C/o ಡಿ.ಎಸ್.ಆರ್. ರಾಜಗುರು
ಸರ್ಕಾರಿ ಜೂನಿಯರ್‌ಕಾಲೇಜು, ಮಾನವಿ

ವಿ.ಎಸ್. ಭಾಗ್ಯರಾಜಶೆಟ್ಟಿ
ಹುಲಿಕಲ್ಲು, ಅರಕಲಗೂಡು(ತಾ)
ಹಾಸನ.

ಕೆ.ಎಂ. ಶ್ರೀನಿವಾಸಮೂರ್ತಿ
ಪತ್ರಕರ್ತರು.ಓಲ್ಡ್‌ಟೌನ್
ಭದ್ರಾವತಿ.

ಎ.ಎಂ. ಶ್ರೀನಿವಾಸ್.
ವಿನಾಯಕ ಟೈಲರ್ಸ್ ದೊಡ್ಡಪೇಟೆ
ಕೋಲಾರ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್, ಬಸ್‌ಸ್ಟಾಂಡ್‌ರೋಡ್
ಗಂಗಾವತಿ.

ಆರ್.ಶೇಷಾದ್ರಿ. ಅರ್ಚಕರು,
ಶ್ರೀಲಕ್ಷ್ಮೀನಾರಾಯಣಸ್ವಾಮಿದೇವಾಲಯ
ಕೊಳ್ಳೇಗಾಲ.

ಬಿ.ಎನ್. ಮುಕುಂದ
1275, ಶ್ರೀಪಾದರಾಜ ಮಠದ ಎದುರು
ಮುಳಬಾಗಿಲು.

ಕೆ.ಎಸ್. ಲಕ್ಷ್ಮೀಕಾಂತ
ಎನ್.ಎ. 93 ಬಿ.ಇ.ಎಲ್. ಕಾಲೋನಿ
ಜಾಲಹಳ್ಳಿ, ಬೆಂಗಳೂರು.

ಟಿ.ಕೆ. ರಾಮಸ್ವಾಮಿ
ತಿರುಪತಿ ವೆಂಕಟೇಶ್ವರ ಸೈಕಲ್‌ಷಾಪ್
ಬಿ.ಎಚ್. ರೋಡ್, ತರೀಕೆರೆ.

ಪ್ರೇಮಾವತಿ
W/o ಪಿ. ಸಾರಂಗಪಾಣಿ. ರೋಜರ್ಸ್ ಕ್ಯಾಂಪ
ಬಿ.ಪಿ. ಬ್ಲಾಕ್
ಮಾರಿಕುಪ್ಪಂ ಕೆ.ಜಿ.ಎಫ್.

ಡಿ. ಗೋಪಾಲಶೆಟ್ಟಿ
ಮದ್ದೂರು.

ಆರ್.ವಾಸುದೇವಶೆಟ್ಟಿ
ದಳಸನೂರು.

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಅತ್ಯಾಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ವೆಲ್‌ಫೇರ್ ಆಫೀಸರ್. ತಿ.ತಿ.ದೇ. ತಿರುಪತಿ**

# ಶ್ರೀ ವೆಂಕಟೇಶ್ವರಸ್ವಾಮಿ ಪವಿತ್ರೋತ್ಸವ

"ಪವಿತ್ರೋತ್ಸವ" ವರ್ಷಕ್ಕೊಂದು ಬಾರಿ ಶ್ರಾವಣಮಾಸದಲ್ಲಿ ಸ್ವಾಮಿ ಸನ್ನಿಧಿಯಲ್ಲಿ ಜರುಗುವ ಒಂದು ಉತ್ಸವ. ವರ್ಷಪರ್ಯಂತವೂ ದಿವ್ಯ ಸನ್ನಿಧಿಯಲ್ಲಿ ತಿಳಿದೋ ತಿಳಿಯದೆಯೋ, ಅಪಚಾರ ಅಪರಾಧಗಳೂ, ನಿತ್ಯನೈಮಿತ್ತಿಕ ಕಾರ್ಯಗಳಲ್ಲಿ ಲೋಪದೋಷಗಳು, ಜರುಗುತ್ತಿರುತ್ತವೆ. ಈ ನ್ಯೂನಾತಿರೇಕಗಳ ಪ್ರಭಾವದಿಂದ ಗುಡಿಯನ್ನು ವಿಮುಕ್ತಗೊಳಿಸಿ ಅದರ ಪವಿತ್ರತೆಯನ್ನು ಕಾಪಾಡುವುದಕ್ಕಾಗಿಯೇ ಸ್ಮೃತಿಶಾಸ್ತ್ರ ಪುರಾಣಾಗಮಗಳಲ್ಲಿ ಹೇಳಲ್ಪಟ್ಟಿರುವ ವಿಧಿ "ಪವಿತ್ರೋತ್ಸವ".

ಚಾಂದ್ರಮಾನ ರೀತಿಯಲ್ಲಾಗಲೀ ಸೌರಮಾನ ರೀತಿಯಲ್ಲಾಗಲೀ ಆಷಾಢ ಶ್ರಾವಣ ಭಾದ್ರಪದ ಮಾಸಗಳಲ್ಲಿ ಶುಕ್ಲ ದ್ವಾದಶಿ ಈ ಉತ್ಸವಕ್ಕೆ ಶ್ರೇಷ್ಠವಾದ ದಿನ. ತಿರುಮಲೆಯಲ್ಲಿ ಈ ಉತ್ಸವ ಚಾಂದ್ರಮಾನ ಶ್ರಾವಣ ಶುಕ್ಲ ದಶಮಿಯ ರಾತ್ರಿ "ಅಂಕುರಾರ್ಪಣ" ದೊಡನೆ ಪ್ರಾರಂಭವಾಗುತ್ತದೆ. ಎರಡನೆಯ ದಿನದ ರಾತ್ರಿ "ಪವಿತ್ರ ಪ್ರತಿಷ್ಠೆ", ಮೂರನೆಯ ಹಗಲು "ಪವಿತ್ರ ಸಮರ್ಪಣೆ". ನಾಲ್ಕನೆಯ ರಾತ್ರಿ "ಪೂರ್ಣಾಹುತಿ ಜರುಗಿ ಐದನೆಯ ಬೆಳಗ್ಗೆ "ಪವಿತ್ರಸರ್ಜನೆ" ಯೊಡನೆ ಈ ಉತ್ಸವ ಮುಕ್ತಾಯವಾಗುತ್ತದೆ.

ದಶಮಿಯದಿನ ಹಗಲಿನ ನಿತ್ಯ ಕೈಂಕರ್ಯಗಳು ಮುಗಿದು, ಸಾಯಂಕಾಲಾರ್ಚನೆಯಾಗಿ ಶ್ರೀ ಸೇನಾಪತಿಯವರು ವಸಂತ ಮಂಟಪಕ್ಕೆ ಬಿಜಯ ಮಾಡಿಸಿ, ಮೃತ್ಸಂಗ್ರಹಣ ನಡೆದು ಸನ್ನಿಧಿಗೆ ಬಂದು, ಪವಿತ್ರೋತ್ಸವಕ್ಕಾಗಿ "ವಿಮಾನ ಪ್ರದಕ್ಷಿಣೆ" ಯಲ್ಲಿರುವ ಕಲ್ಯಾಣ ಮಂಟಪದಲ್ಲಿ ನಿರ್ಮಿಸಿರುವ ಯಾಗಶಾಲೆಯಲ್ಲಿ ಅಂಕುರಾರ್ಪಣೆಯಾಗುವುದು. ತರುವಾಯ ರಾತ್ರಿಯ ಕೈಂಕರ್ಯಗಳು ಪೂರ್ತಿಯಾದ ಮೇಲೆ ಸನ್ನಿಧಿಯ ತೀರ್ಮಾನವಾಗುತ್ತದೆ.

ಮರುದಿನ ಬೆಳಗಿನ ಕೈಂಕರ್ಯಗಳಾದ ಮೇಲೆ ಯಾಗಶಾಲೆಯಲ್ಲಿ ಉಭಯನಾಚ್ಚಿಯಾರೊಡನೆ ಮಲಯಪ್ಪಸ್ವಾಮಿಯವರಿಗೆ 'ಅಲಂಕಾರ ತಿರುಮಂಜನ' ಜರುಗುತ್ತದೆ. 'ಪವಿತ್ರೋತ್ಸವಕ್ಕೆ' ಹಣಸಲ್ಲಿಸಿದ ಗೃಹಸ್ಥರಿಂದ 'ದತ್ತ' ಮಾಡಲ್ಪಟ್ಟು ಯಾಗಶಾಲಾಲಂಕರಣ ಜರುಗಿ, ಮಧ್ಯಾಹ್ನಿಕ ಕೈಂಕರ್ಯಗಳು ಜರುಗುತ್ತವೆ.

ಯಾಗಶಾಲೆಯಲ್ಲಿ ಅಕಲ್ಮಷ ಹೋಮವೇ ಮೊದಲಾದ ಕಾರ್ಯಗಳು, ಮಲಯಪ್ಪ ಸ್ವಾಮಿ ಉಭಯನಾಚ್ಚಿಯಾರರಿಗೆ ತಿರುವಾಭರಣ ಸಮರ್ಪಣೆ, ಬಂಗಾರದ ತಿರುಚ್ಚಿಯಲ್ಲಿ ತಿರುವೀಧಿ ಉತ್ಸವ, ಸನ್ನಿಧಿಗೆ ಬಿಜಯಮಾಡುವಿಕೆ, ರಾತ್ರಿ ತೋಮಾಲೆ. ಗಂಟೆ ರಾತ್ರಿಯಾಗಶಾಲೆಯಲ್ಲಿ ಹೋಮಗಳು, ರಾತ್ರಿ ಗಂಟೆ, ತಿರುವೀಸ, ಏಕಾಂತಸೇವೆ ಜರುಗುತ್ತವೆ. ಯಾಗಶಾಲೆಯಲ್ಲಿ ಪ್ರಧಾನ ಕಲಶಸ್ಥಾಪನೆ, ಸುದರ್ಶನ ಮಂಡಲಾಲಂಕರಣ—ಇವು ಸಾಯಂಕಾಲವೇ ಮುಗಿದು, ರಾತ್ರಿ ಪಂಚಾಗ್ನಿ ಪ್ರಣಯನ, ಔಪಾಸನಾಗ್ನಿಯಲ್ಲಿ ಅಧಿವಾಸ ಹೋಮಗಳು, ಪವಿತ್ರ ಪ್ರತಿಷ್ಠೆ ಕುಂಭಾವಾಹನ, ನಿವೇದನ, ಪವಿತ್ರಗಳಿಗೆ ರಕ್ಷಾಬಂಧನ, ಶಯನ, ಹೌತ್ರ ಪ್ರಶಂಸನ, ಉಕ್ತಹೋಮಗಳು, ಪೂರ್ಣಾಹುತಿ ನಡೆಯುತ್ತವೆ.

ದ್ವಾದಶಿಯಂದು ಬೆಳಗಿನ ಕೈಂಕರ್ಯಗಳು ಮುಗಿದ ಮೇಲೆ ಪವಿತ್ರಗಳನ್ನು ಛತ್ರ ಚಾಮರಾದಿ ಸಕಲ ಮರ್ಯಾದೆಗಳೊಡನೆ ವಿಮಾನ ಪ್ರದಕ್ಷಿಣೆ ಮಾಡಿಸಿ ಮೂಲಸ್ಥಾನದಿಂದ ಬೇಡಿ ಆಂಜನೇಯರ ಸನ್ನಿಧಿಯವರೆಗೆ ಇರುವ ಅಧಿಷ್ಠಾನ, ಮತ್ತು ಎಲ್ಲ ಪರಿವಾರ ದೈವಗಳಿಗೂ ಸಮರ್ಪಿಸುತ್ತಾರೆ. ತರುವಾಯ ನಿತ್ಯ ಕೃತ್ಯಗಳು ಹಿಂದಿನಂತೆಯೇ ಜರುಗುತ್ತವೆ.

ಮೂರನೆಯ ದಿನ ಹಿಂದಿನಂತೆಯೇ ಕೈಂಕರ್ಯಗಳು ಜರುಗಿ ರಾತ್ರಿ ಪೂರ್ಣಾಹುತಿಯೊಡನೆ ಕ್ರತುವು ಪೂರ್ತಿಯಾಗುತ್ತದೆ.

ಪವಿತ್ರೋತ್ಸವಕ್ಕೆ ಹಣಸಲ್ಲಿಸಿದ ಗೃಹಸ್ಥರಿಗೆ ಬೆಳ್ಳಿಯ ಬೆತ್ತಗಳು ಕೊಡಲ್ಪಟ್ಟು, ಶ್ರೀಸ್ವಾಮಿಯವರ ತಿರುವೀಧಿಪ್ರದಕ್ಷಿಣೆಯ ಮೆರವಣಿಗೆಯಲ್ಲಿ ಭಾಗವಹಿಸುವ ಅವಕಾಶ ದೊರೆಯುತ್ತದೆ. ಮತ್ತು ಅವರಿಗೆ ಪ್ರಸಾದ, ವಸ್ತ್ರಬಹುಮಾನಗಳು ದೊರೆಯುತ್ತವೆ.

ಈ ಉತ್ಸವದಲ್ಲಿ ಗಮನಿಸಬೇಕಾದದ್ದೆಂದರೆ 'ಪವಿತ್ರ'ಗಳನ್ನು ಕುರಿತ ವಿಶೇಷ. "ಪವಿತ್ರಗಳು" ಪರಿಶುದ್ಧವಾದ ನೂಲಿನಿಂದಾಗಲಿ, ರೇಷ್ಮೆಯಿಂದಾಗಲೀ ಮಾಡಲ್ಪಟ್ಟು, ನಿಗದಿಯಾದ ಉದ್ದ ಗಾತ್ರಗಳನ್ನು ಹೊಂದಿರುತ್ತವೆ. ಪವಿತ್ರಗಳ ಮೇಲೆ ಅಲ್ಲಲ್ಲಿ ಹಲವಾರು ಗಂಟುಗಳಿದ್ದು ಅಷ್ಟು ದೂರದಿಂದ ನೋಡುವವರಿಗೆ ತುಳಸಿಮಣಿಗಳ ಮಾಲೆಗಳಂತೆ ಕಾಣುತ್ತವೆ. ಇವು ವಿಗ್ರಹದ ಎತ್ತರ ಮತ್ತು ಅಗಲಗಳನ್ನು ಅನುಸರಿಸಿ ಮಾಡಲ್ಪಟ್ಟಿರುತ್ತವೆ. ಕಂಠದಿಂದ ಪಾದದವರೆಗೆ, ಜಾನುಪರ್ಯಂತ ಊರು ಪರ್ಯಂತ, ಕಟಿ ಪರ್ಯಂತ, ನಾಭಿ ಪರ್ಯಂತ, ಕೊರಳು, ಶಿರಸ್ಸುಗಳಲ್ಲಿ ಮತ್ತು ಶಂಖ ಚಕ್ರಗಳಿಗೆ ಪವಿತ್ರಗಳು ಅರ್ಪಿಸಲ್ಪಡುತ್ತವೆ.

ಪವಿತ್ರಗಳನ್ನು ಬಂಗಾರದಲ್ಲಿ ಮಾಡುವುದು ಉತ್ತಮವೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ಹಾಗೆಯೇ ಪವಿತ್ರೋತ್ಸವ ಒಂಭತ್ತು ದಿನಗಳು ಜರುಗಿಸುವುದು ಉತ್ತಮವೆಂದೂ ಹೇಳಲ್ಪಟ್ಟಿದೆ.

ತಿರುಮಲೆಯಲ್ಲಿ ಪವಿತ್ರೋತ್ಸವ ಶಾಲಿವಾಹನ ಶಕ 1385 ಸರಿಯಾದ ಸುಭಾನು ಸಂವತ್ಸರದ ಮಕರ ಮಾಸದ ಶುಕ್ಲದಶಮಿ, ರೋಹಿಣೀನಕ್ಷತ್ರ ಯುಕ್ತ ಸೋಮವಾರದಲ್ಲಿ, ಸಾಳ್ವ ಎರ್ರಕಂಪಯ್ಯದೇವ ಮಹಾರಾಜ ಕುಮಾರರು ಮದಿನಿ ಮಿಶ್ರಗಂಡ ಕಟ್ಟಾರಿ ಸಾಳ್ವಮಲ್ಲಯ್ಯದೇವ ಮಹಾರಾಜರಿಂದ ಏರ್ಪಡಿಸಲ್ಪಟ್ಟಿತೆಂದು ಶಿಲಾಶಾಸನಗಳಿಂದ ತಿಳಿದುಬರುತ್ತದೆ. ತರುವಾಯ ಈ ಉತ್ಸವ ಎಷ್ಟು ಕಾಲ ನಡೆಯಿತು, ಯಾವಾಗ ನಿಂತುಹೋಯಿತು ಎನ್ನುವ ವಿವರಗಳು ತಿಳಿಯವು. ಬಹುಕಾಲ ನಡೆಯದಿದ್ದ ಈ ಉತ್ಸವ 1962 ರಲ್ಲಿ ಪುನರುದ್ಧರಿಸಲ್ಪಟ್ಟು, ಬಹು ವಿಜೃಂಭಣೆಯಿಂದ ಜರುಗುತ್ತಿದೆ.

'ಪವಿತ್ರೋತ್ಸವ'ದ ಸಮಯ ಭಗವಂತನಿಗೂ ಒಂದು ದೀಕ್ಷಾ ಸಮಯ. ಈ ಉತ್ಸವ ಸಮಯದಲ್ಲಿ ಉತ್ಸವಮೂರ್ತಿ ಯಾಗಶಾಲೆಯಲ್ಲೇ ರಕ್ಷೆ ಕಟ್ಟಿಕೊಂಡು ದೀಕ್ಷೆಯಲ್ಲಿರುತ್ತಾರೆ. ಮೂಲಸ್ಥಾನಕ್ಕೆ ಹಿಂದಿರುಗುವುದು ಪೂರ್ಣಾಹುತಿ ಮುಗಿದ ಮೇಲೆಯೇ, ಈ ದಿನಗಳಲ್ಲಿ ಕಲ್ಯಾಣೋತ್ಸವ ಮೊದಲಾದ ವಿಶೇಷ ಉತ್ಸವಗಳು ಜರುಗುವುದಿಲ್ಲ.

ಈ ವರ್ಷ ತಿರುಮಲೆಯಲ್ಲಿ ಪವಿತ್ರೋತ್ಸವ 26.8.85 ರಿಂದ 28.8.85ರ ವರೆಗೆ ಜರುಗಲಿದೆ.

ಶ್ರೀ ಎಂ.ವಿ. ಸುಬ್ಬಾರಾವ್

ಆಧಾರ : ಪಂಡಿತ ಆರ್. ಪಾರ್ಥಸಾರಥಿ ಭಟ್ಟಾಚಾರ್ಯರ ಲೇಖನ

## ಕಿಶೋರಜಗತ್

# ನಾಮದೇವ



ಧಾರ್ಮಿಕತೆ ಭಾರತದ ಸಂಸ್ಕೃತಿಯ ಜೀವಾಳ. ಧರ್ಮದ ಬೆಳವಣಿಗೆಗೆ ತನ್ನ ಕೊಡುಗೆಯನ್ನು ಹಿಂದಿನಿಂದಲೂ ನೀಡುತ್ತಾ ಬಂದಿದೆ ಭಾರತ. ಅಸಂಖ್ಯಾತ ಧಾರ್ಮಿಕ ಪುರುಷರು ಇಲ್ಲಿ ಜನ್ಮವೆತ್ತಿ, ಧರ್ಮಜ್ಯೋತಿಯನ್ನು ಬೆಳಗಿಸಿ, ಮುಕ್ತಿ ಹೊಂದಿದ್ದಾರೆ. ಜನತೆಗೆ ಧರ್ಮಾಮೃತದ ಸವಿಯೂಟ ಉಣಿಸಿದ್ದಾರೆ. ಜನರಲ್ಲಿ ಹುದುಗಿದ್ದ ಅಜ್ಞಾನದ ಕತ್ತಲೆಯನ್ನು ಓಡಿಸಿ, ಪರಮಾತ್ಮನ ಅರಿವಿನ ಬೆಳಕನ್ನು ಹರಿಸಲು ತಮ್ಮ ಜೀವನವನ್ನು ಮುಡಿಪಾಗಿಟ್ಟ ಸಾಧು ಸಂತರಲ್ಲಿ ನಾಮದೇವನೂ ಒಬ್ಬನು.

ಮಹಾರಾಷ್ಟ್ರದ ಪಂಡರಪುರವು ಭೀಮಾ ನದಿಯ ದಡದಲ್ಲಿದ್ದು, ಭಗವದಾರಾಧನೆಯ ಕೇಂದ್ರವಾಗಿತ್ತು. ಈ ಪುಣ್ಯ ಸ್ಥಳದಲ್ಲಿ ನಾಮದೇವನು ಕ್ರಿ. ಶ. 1270 ನೆಯ ಇಸವಿಯಲ್ಲಿ ಜನಿಸಿದನು. ದಮಸೇಠ್ ಮತ್ತು ಗೋಣಾಬಾಯಿಯವರು ಅವನ ತಂದೆ ತಾಯಿಗಳಾಗಿದ್ದರು. ಬಟ್ಟೆ ಮಾರುವುದು ಅವರ ವೃತ್ತಿಯಾಗಿತ್ತು. ಪರ್ಭಣಿ ಜಿಲ್ಲೆಯಲ್ಲಿ ವಾಸಿಸುತ್ತಿದ್ದ ಅವರು ಅನಂತರ ಪಂಡರಾಪುರಕ್ಕೆ ಬಂದು ನೆಲಸಿದರು.

ನಾಮದೇವನು ಸಾಮಾನ್ಯಶಿಕ್ಷಣ ಮಾತ್ರ ಪಡೆದನು. ಆದರೆ ಸಂಸಾರದಲ್ಲಿ ಇಷ್ಟಪಡಲಿಲ್ಲ. ಅವನು ವಿಠೋಬನ ಆರಾಧಕನಾದನು. ವಿಗ್ರಹಾರಾಧಕನಲ್ಲದ ವಿಠೋಬ ಖೇಚರನು ಅವನ ಗುರುವಾಗಿದ್ದನು. "ನಿಜವಾದ ದೇವರು ಬೇರೆ. ಜಗತ್ತಿನಲ್ಲಿ ದೇವರು ಇಲ್ಲದ ಸ್ಥಳವೇ ಇಲ್ಲ" ಎಂದು ನಾಮದೇವನಲ್ಲಿ ಹೇಳಿ, ನಾಮದೇವನ ಹೃದಯದಲ್ಲೂ ದೇವರನ್ನು ತೋರಿಸಿದ್ದ ವಿಠೋಬ ಖೇಚರ. ಗುರುವಿನ ಆಶೀರ್ವಾದವನ್ನು ಸಂಪೂರ್ಣವಾಗಿ ನಾಮದೇವ ಪಡೆದುಕೊಂಡಿದ್ದನು.

ಸಂತ ಜ್ಞಾನೇಶ್ವರ ವಿಠಲ ಸಂಪ್ರದಾಯವನ್ನು ಸ್ಥಾಪಿಸಿದವನು. ಆದರೆ ಅದನ್ನು ಹರಡಲು ಹೆಚ್ಚು ಕಾಲಾವಕಾಶ ದೊರೆಯಲಿಲ್ಲ. ಜ್ಞಾನೇಶ್ವರನ ನಂತರ ನಾಮದೇವನು ಆ ಕಾರ್ಯವನ್ನು ತನ್ನ ಕೈಗೆತ್ತಿಕೊಂಡನು. ತಾನು ನಂಬಿದ ದೇವರು ಮತ್ತು ಅವನಿಗೆ ಸಂಬಂಧಿಸಿದ ವಿಷಯಗಳನ್ನು ತಿಳಿಸಲು ಕೀರ್ತನೆಗಳನ್ನೂ ಅಭಂಗಗಳನ್ನೂ ರಚಿಸಿದನು.

ಜಗತ್ತಿನ ಎಲ್ಲಾ ಆಗುಹೋಗುಗಳಿಗೆ ದೇವರೇ ಕಾರಣನಾಗಿದ್ದಾನೆ ಎಂದು ನಾಮದೇವ ಬಲವಾಗಿ ನಂಬಿದ್ದನು. ಅವನು ಜನರಿಗೆ ದೇವರ ಅನಂತಶಕ್ತಿಯನ್ನು ಕುರಿತು, "ದೇವರ ಅನುಗ್ರಹದಿಂದ ಮೋಡಗಳು ಮಳೆಯನ್ನು ಸುರಿಸುತ್ತವೆ, ಪರ್ವತಗಳು ಧೃಢವಾಗಿವೆ ಮತ್ತು ಗಾಳಿಯು ಬೀಸುತ್ತದೆ. ದೇವನಿಲ್ಲದೆ ಯಾವ ಕ್ರಿಯೆಯು ನಡೆಯಲಾರದು. ಪಾಂಡುರಂಗನೆ ಎಲ್ಲವನ್ನು ನಡೆಸುತ್ತಾನೆ" ಎಂದು ಹೇಳುತ್ತಿದ್ದನು. ಪಂಡರಪುರದ ವಿಠಲ ಮೂರ್ತಿಯನ್ನು ಪೂಜಿಸಿದ ನಾಮದೇವನು ದೇವರ ಬಗ್ಗೆ ನಿಜವಾದ ಜ್ಞಾನವನ್ನು ಹೊಂದಿದ್ದನು.

ದೇವರನ್ನು ಒಲಿಸುವುದಕ್ಕಾಗಿ ಕಠಿಣ ಮಾರ್ಗಗಳನ್ನು ಅನುಸರಿಸುತ್ತಾರೆ. ಕೆಲವರು ನೀರು, ಆಹಾರವನ್ನು ತೊರೆಯುತ್ತಾರೆ. ಇಷ್ಟವಾದ ಪದಾರ್ಥಗಳನ್ನು ಸೇವಿಸುದಿಲ್ಲ. ಹಲವರು ಕಷ್ಟಪಟ್ಟುಕೊಂಡು ಯಾತ್ರೆಗೆ ಹೋಗುತ್ತಾರೆ. ನಾಮದೇವನು ಈ ಯಾವುದರ ಅವಶ್ಯಕತೆಯೂ ಇಲ್ಲವೆಂದು ನುಡಿಯುತ್ತಾನೆ. "ಹೃದಯ ಮಂದಿರದಲ್ಲಿ ಹರಿಯ ಗುಣಗಾನ ಮಾಡಿ, ಮನಸ್ಸನ್ನು ಅವನ ಪಾದಕಮಲಗಳಲ್ಲಿಡು. ಹರಿಯ ಹೆಸರನ್ನು ಹಾಡು. ಪಾಂಡುರಂಗ ದಯೆ ತೋರುತ್ತಾನೆ," ಎಂದು ದೇವರನ್ನೊಲಿಸಲು ಸುಲಭ ದಾರಿ ತೋರಿಸಿದ್ದಾನೆ.

ಕೇವಲ ಮೂರ್ತಿಯಲ್ಲಿ ದೇವರನ್ನು ಕಾಣುವವನು ನಿಜವಾದ ಭಕ್ತನಲ್ಲ ಎಂದು ಅಭಿಪ್ರಾಯಪಡುತ್ತಾನೆ. "ನಿಜವಾದ ಭಕ್ತ ಎಲ್ಲ ವಸ್ತುಗಳಲ್ಲೂ ದೇವರನ್ನು ಕಾಣುತ್ತಾನೆ ಅವನಿಗೆ ಎಲ್ಲಾ ಸಂಪತ್ತು ಮಣ್ಣಿನಂತೆ ಕಾಣುತ್ತದೆ. ನವರತ್ನಗಳು ಕಲ್ಲಿನಂತೆ ಗೋಚರಿಸುತ್ತವೆ. ಅವನು ಕೋಪ, ಅಪೇಕ್ಷೆಗಳನ್ನು ತೊರೆದು ದಯಾಮಯನೂ, ತಾಳ್ಮೆಯನ್ನು ಹೊಂದಿದವನೂ ಆಗಿರುತ್ತಾನೆ ಮನಸ್ಸಿನಲ್ಲಿ ಗೋವಿಂದನ ಭಜನೆ ಎಡಬಿಡದೇ ಮಾಡುತ್ತಾನೆ." ಎಂದು ಅವನು ನಂಬಿದ್ದನು.

ನಾಮದೇವನು ದೇವರಲ್ಲಿ ತುಂಬಾ ನಂಬಿಕೆಯನ್ನಿಟ್ಟಿದ್ದನು. ಅವನ ಭಕ್ತಿ ಅನಂತವಾದುದು. 'ದೇವರ ಪಾದವನ್ನು ನೆನೆಯುವುದು ಒಂದು ಕ್ಷಣ ಬಿಟ್ಟರೂ ತನ್ನ ಜೀವದ ಉಸಿರು ಇಲ್ಲವಾಗುತ್ತದೆ,' ಎನ್ನುವ ಮಾತಿನಲ್ಲಿ ಅವನ ಭಕ್ತಿಸಾಗರದ ಆಳದ ಪರಿಚಯವಾಗುತ್ತದೆ. 'ನಾವು ದೇವರನ್ನು ಹಾಡಿದಂತೆ ಅವನೂ ಸಂತೋಷಪಡುತ್ತಾನೆ. ಅವನ ಚಿಂತೆಯಿಂದ ಕುಣಿದರೆ ಅವನೂ ನಮ್ಮ ಮುಂದೆ ಕುಣಿಯುತ್ತಾನೆ.' ಎಂದಿದ್ದಾನೆ ನಾಮದೇವ. ದೇವರನ್ನು ಕಂಡಾಗ ತನಗೆ ಅತಿಯಾದ ಸಂತೋಷವುಂಟಾಯಿತು ಎನ್ನುತ್ತಾನೆ. ಹಸುವು ತನ್ನ ಕರುವಿನೆಡೆಗೆ ಬರುವ ರೀತಿಯಲ್ಲಿ ದೇವರು ತನ್ನನ್ನು ಸಮೀಪಿಸಿದನು ಎಂದು ತನಗಾದ ದೇವರದರ್ಶನವನ್ನು ಕುರಿತು ಜನರಲ್ಲಿ ಹೇಳುತ್ತಿದ್ದನು.

ಹೀಗೆ ತನ್ನ ಜೀವನವನ್ನು ದೇವರ ಚಿಂತನೆಯಲ್ಲಿಯೇ ಕಳೆದ ನಾಮದೇವ, ಎಂಭತ್ತು ವರ್ಷ ಬದುಕಿ ಭಗವಂತನ ಪಾದ ಸೇರಿದನು. ಜೀವನದ ಅವಧಿಯಲ್ಲಿ ವಿಠಲ ಸಂಪ್ರದಾಯಕ್ಕೆ ತನ್ನ ಅಮೂಲ್ಯ ಕಾಣಿಕೆ ನೀಡಿದ್ದಾನೆ. ಜೀವನದುದ್ದಕ್ಕೂ ಜನರಲ್ಲಿ ಆಧ್ಯಾತ್ಮದ ಒಲವು ಮೂಡಿಸಿದ್ದಾನೆ. ಜನರ ಹೃದಯ ಮಾಲಿನ್ಯವನ್ನು ತೊಲಗಿಸಿ, ಅವರಲ್ಲಿ ದೇವಗುಣವನ್ನು ಬಿತ್ತಿ, ಜನಮನದಲ್ಲಿ ನೆಲೆಸಿ ಹೋಗಿದ್ದಾನೆ. ಇಂತಹ ನಾಮದೇವನು ಪಂಡರಾಪುರದ ಪಾಂಡುರಂಗನ ಶ್ರೇಷ್ಠ ಭಕ್ತನೆಂದು ಕರೆಯಲು ಯೋಗ್ಯನಾಗಿದ್ದಾನೆ.

**ಶ್ರೀ ಸಿ. ಎಸ್. ಮಂಜುನಾಥ**

# ಹರಿದಾಸರ ಕಂಡ ರಾಘವೇಂದ್ರರು

ಕರ್ನಾಟಕದ ಹರಿದಾಸರು ವಿನಾಯಕನಿಂದ ಆರಂಭಿಸಿ ಶ್ರೀಹರಿಯವರೆಗೆ ಎಲ್ಲ ದೇವತೆಗಳನ್ನು ಸ್ತುತಿಸಿರುವರು. ದೇವತಾಸ್ತುತಿಪರಗಳಾದ ಹರಿದಾಸರ ಕೃತಿಗಳಲ್ಲಿ ಶ್ರೀನಿವಾಸ, ಕೃಷ್ಣ ಹಾಗೂ ಹನುಮಂತ ಇವರಿಗೆ ಸಂಬಂಧಿಸಿದ ಕೃತಿಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುವುವು. ವಿಜಯದಾಸರಿಂದ ಪ್ರಾರಂಭಿಸಿ ಈ ಹರಿದಾಸರ ದೇವತಾಸ್ತೋತ್ರರೂಪ ಸಾಹಿತ್ಯದಲ್ಲಿ ಮೇಲ್ಕಂಡ ದೇವತೆಗಳಂತೆ ನಾಲ್ಕನೆಯ ಸ್ಥಾನವನ್ನು ಗಳಿಸಿದ ದೇವತಾಮೂರ್ತಿ ಶ್ರೀ ರಾಘವೇಂದ್ರತೀರ್ಥರು. ರಾಘವೇಂದ್ರತೀರ್ಥರ ಜೀವನ ಹಾಗೂ ಇವರ ಹಿಂದಿನ ಅವತಾರಗಳು ಹರಿದಾಸರ ಸಾಹಿತ್ಯದಲ್ಲಿ ಹಾಸುಹೊಕ್ಕಾಗಿ ಸೇರಿವೆ. ಗುರುಸಾರ್ವಭೌಮರ ಜೀವನ ಪ್ರಕೃತ ಸಮಾಜಕ್ಕೆ ಯಾವ ವಿಧದಲ್ಲಿ ಆದರ್ಶಪ್ರಾಯವಾಗಿದೆ, ಅವರಲ್ಲಿ ಮಾನವನ ಜೀವಿಕೆ ಯಾವುದಾಗಿರಬೇಕು – ಈ ಎಲ್ಲವನ್ನೂ ಹರಿದಾಸರು ತಮ್ಮ ಕೃತಿಗಳಲ್ಲಿ ಸ್ಪಷ್ಟಪಡಿಸಿರುವರು.

ಕೃತಯುಗದಲ್ಲಿ ಭಾಗವತಧರ್ಮವನ್ನು ಬಿತ್ತರಿಸಿದ ಪ್ರಹ್ಲಾದನೇ ಪುನಃ ಶ್ರೀಹರಿಯ ಆದೇಶದಂತೆ ಲೋಕದ ಉದ್ಧಾರಕ್ಕಾಗಿ, ಧರ್ಮದ ಪುನಃ ಪ್ರತಿಷ್ಠಾಪನೆಗಾಗಿ ಕಲಿಯುಗದಲ್ಲಿ ವ್ಯಾಸತೀರ್ಥರಾಗಿಯೂ, ನಂತರ ರಾಘವೇಂದ್ರತೀರ್ಥರಾಗಿಯೂ ಅವತರಿಸಿದನೆಂಬುದು ಹರಿದಾಸರ ಕೃತಿಗಳಿಂದ ಸ್ಪಷ್ಟವಾಗುವುದು.

ಭಾಗವತದ ಸಪ್ತಮ ಸ್ಕಂಧದ ನಾಯಕ ಪ್ರಹ್ಲಾದ. ಬಾಲ್ಯದಲ್ಲಿಯೇ ದೈತ್ಯಬಾಲಕರನ್ನು ಉದ್ಧರಿಸಿದ ಭಾಗವತೋತ್ತಮನು ಇವನು; "ಕೌಮಾರೇ ಆಚರೇತ್ಪ್ರಾಜ್ಞಃ ಧರ್ಮಾನ್ ಭಾಗವತಾನಿಹ" ಎಂದು ಲೋಕಕ್ಕೆ ಸಂದೇಶ ನೀಡಿದ ವೈರಾಗ್ಯಮೂರ್ತಿ ಪ್ರಹ್ಲಾದ.

ಈ ಪ್ರಹ್ಲಾದನ ಎರಡನೇ ಅವತಾರವೆನಿಸಿದ ವ್ಯಾಸತೀರ್ಥರ ಜೀವನವೂ ಸಹ ವೈರಾಗ್ಯಕ್ಕೆ ಕೈಗನ್ನಡಿಯಾಗಿದೆ. ಬಾಲ್ಯದಲ್ಲಿಯೇ ಸನ್ಯಾಸಾಶ್ರಮದಲ್ಲಿ ಕಾಲಿಟ್ಟವರಿವರು. ಗುರುಗಳಾದ ಶ್ರೀಪಾದರಾಜರ ಆದೇಶದಂತೆ ಹಾಗೂ ಸಾಳುವ ನರಸಿಂಹನ ಪ್ರಾರ್ಥನೆಯಂತೆ 12 ವರ್ಷಗಳ ಕಾಲ ತಿರುಮಲೆಯಲ್ಲಿದ್ದು ಶ್ರೀನಿವಾಸನ ಪೂಜಾದಿಗಳನ್ನು ಮಾಡಿ, ಪುನಃ ಅರ್ಚಕ ಮನೆತನದವರಿಗೆ ಶ್ರೀನಿವಾಸನ ಪೂಜಾಸೌಭಾಗ್ಯವನ್ನು ಬಿಟ್ಟು ಕೊಟ್ಟವರು. ಕೃಷ್ಣದೇವರಾಯನ ಕುಹುಯೋಗವನ್ನು ಪರಿಹರಿಸುವುದಕ್ಕಾಗಿ ಸಿಂಹಾಸನವನ್ನೇರಿ, ಪುನಃ ರಾಜ್ಯಭಾರವನ್ನು ರಾಜನಿಗೊಪ್ಪಿಸಿದ ಅನಾಸಕ್ತರು ಇವರು.

ಈ ವ್ಯಾಸತೀರ್ಥರೇ ಮುಂದೆ ರಾಘವೇಂದ್ರತೀರ್ಥರಾಗಿ ಅವತರಿಸಿದರು. ರಾಘವೇಂದ್ರತೀರ್ಥರ ಜೀವನದ ಉದ್ದಕ್ಕೂ ಜ್ಞಾನ–ಭಕ್ತಿ–ವೈರಾಗ್ಯಗಳು ಎದ್ದು ತೋರುತ್ತವೆ.

ರಾಘವೇಂದ್ರತೀರ್ಥರ ಈ ಮೂರು ಅವತಾರಗಳ ಹಿರಿಮೆಯನ್ನು ಹರಿದಾಸರು ಮನಸಾರ ಹಾಡಿ ಹೊಗಳಿದ್ದಾರೆ. ವಿಜಯದಾಸರು ತಮ್ಮ ಒಂದು ಕೃತಿಯಲ್ಲಿ;

ನಮೋ ನಮೋ ಯತಿರಾಜ
ಮಮತೆ ರಚಿತ ಅನುಪಮ ಚರಿತ–
ಚಾರುಹಾಸನೆನಿಪ ನಿನ್ನ।
ಹೆಮ್ಮೆಯಿಂದಲಿಪ್ಪ ಪರಬೊಮ್ಮ ವಿಜಯವಿಠಲನಾ–
ತುಮದೊಳರ್ಚಿಪ ಜ್ಞಾನೋ
ತ್ತಮ ತುಂಗಭದ್ರವಾಸ

ಎಂದು ಹೇಳಿದರೆ, ಗೋಪಾಲದಾಸರು ;

ಪ್ರಥಮ ಪ್ರಹ್ಲಾದ ವ್ಯಾಸಮುನಿಯ
ಯತಿರಾಘವೇಂದ್ರ।
ಪತಿತರನುದ್ಧರಿಪ ಪಾವನಕಾರಿಯೆ
ಕೈಮುಗಿವೆನು ದೊರೆಯೆ
ಕ್ಷಿತಿಯೊಳು ಗೋಪಾಲವಿಠಲನ ನೆನೆಯುತ ವರ
ಮಂತ್ರಾಲಯದೊಳು ಶುಭವೀಯುತ॥

–ಎಂದು ಹಾಡಿದ್ದಾರೆ. ಗುರುಜಗನ್ನಾಥದಾಸರು ಸಹ;

ನೋಡಿದೆ ಗುರುರಾಯರನ್ನು ಈ
ರೂಢಿಯೊಳಗೆ ಮೆರೆವೊ ಸಾರ್ವಭೌಮನನ್ನು॥
ದಿನನಾಥ ದೀಪ್ತಿ ಭಾಸಕನ ಭವ
ವನಧಿ ಸಂತರಣ ಸುಪೋತ ಕೋವಿದನ।
ಮುನಿಜನ ಕುಲದಿ ಶೋಭಿಪನ ಸ್ವೀಯ
ಜನರ ಪಾಲಕ ಮಹರಾಯನೆನಿಪನ॥

ಎಂದು ವರ್ಣಿಸಿ ಗುರುರಾಯರ ಅವತಾರಗಳ ಜೀವನದ ನಿಜತತ್ತ್ವವನ್ನು ತಿಳಿಯಹೇಳಿರುವರು.

ಇಂತು ಹರಿದಾಸರು ಚಿತ್ರಿಸಿದಂತೆ ಎಲ್ಲ ಅವತಾರಗಳಲ್ಲೂ ಜ್ಞಾನ – ಭಕ್ತಿ – ವೈರಾಗ್ಯ ಭಾಗ್ಯಶಾಲಿಗಳಾದ ಗುರುಸಾರ್ವಭೌಮರು ತಮ್ಮನ್ನೇ ನಂಬಿ ಆರಾಧಿಸುವ ಜನರಿಗೆ ಪರತತ್ತ್ವದ ಗುರಿಯನ್ನೇ ತೋರಿಕೊಡುವರು. ರಸಿಕನು ರಾಗವನ್ನೂ, ರಾಜನು ಕ್ಷಾತ್ರವನ್ನೂ, ಸನ್ಯಾಸಿಯು ವೈರಾಗ್ಯವನ್ನು ಬೋಧಿಸುವರು; ಇದು ಲೋಕ ಸಹಜ.
ಜಗನ್ನಾಥದಾಸಾರ್ಯರು;

ಕರುಣೆಗಳೊಳಗೆಣೆಗಾಣೆನೊ ನಿನಗೆ ಸ
ದ್ಗುರುವರ ರಾಘವೇಂದ್ರ
ರಾಘವೇಂದ್ರ ಗುರು ನೀ ಗತಿ ಎಂದನು
ರಾಗದಿ ಭಜಿಸುತಿಪ್ಪ
ಭಾಗವತರ ದುರಿತೌಘಗಳಳಿಸಿ ಚ
ನ್ನಾಗಿ ಸಂತೈಸುವಿ ನೀ ಸನ್ಯಾಸಿ॥

ಎಂದು ಹೇಳಿ ಮೇಲ್ಕಂಡ ವಿಷಯವನ್ನು ಸ್ಪಷ್ಟಪಡಿಸಿರುವರು. ಗುರುರಾಜರು ತಮ್ಮನ್ನಾಶ್ರಯಿಸಿದ ವ್ಯಕ್ತಿಯ ಸಕಲ ದುಃಖಗಳನ್ನು ಪರಿಹರಿಸಿ ಅವನಿಗೆ ಇಹಸುಖವನ್ನು ಕರುಣಿಸುವರು. ಆದರೆ ಗುರುರಾಜರು ಕರುಣಿಸಿದ ಇಹದ ಸುಖ ಸಂಸಾರ ಬಂಧಕವಾಗಿದೆ ತಾರಕವಾಗುವುದು, ಭಗವತ್ಪ್ರಾಪ್ತಿಗೆ ಕೈದೀವಟಿಗೆಯಾಗುವುದು. 'ಭಾಗವತರ ದುರಿತೌಘಗಳಳಿಸಿ' ಎಂಬ ದಾಸರ ವಚನ ಬಹ್ವರ್ಥಗರ್ಭಿತವಾದುದು.

ಭಾಗವತರಿಗೆ ಸಾಂಸಾರಿಕ ದುಃಖಗಳು ದುರಿತಗಳೆನಿಸಲಾರವು. ಭಗವಂತನಿಂದ ದೂರವಿರುವುದೇ ಅವರಿಗೆ ನಿಜವಾದ ದುರಿತ. ದಾಸರ ಈ ವಾಣಿಗೆ ಪ್ರೇರಕವಾದದ್ದು

ಅಪರೋಕ್ಷೀಕೃತ ಶ್ರೀಶಃ
ಸಮುಪೇಕ್ಷಿತ ಭಾವಜಃ।
ಅಪೇಕ್ಷಿತ ಪ್ರದಾತಾನ್ಯೋ
ರಾಘವೇಂದ್ರಾನ್ನ ವಿದ್ಯತೇ॥

ಎಂಬ ಅಪ್ಪಣಾಚಾರ್ಯರ ವಚನ. ಇಷ್ಟಾರ್ಥವನ್ನು ಪೂರೈಸುವಲ್ಲಿ ಗುರುರಾಜರು ಸಮರ್ಥರು. ಆದರೆ ಗುರುರಾಜರು ಎಂಥಾ ಇಷ್ಟಾರ್ಥಗಳನ್ನು ಕೊಡುತ್ತಾರೆ ಎನ್ನುವುದನ್ನು ತಿಳಿಸುವುದಕ್ಕಾಗಿಯೇ ಅಪ್ಪಣಾಚಾರ್ಯರು "ಅಪರೋಕ್ಷೀ

ಶ್ರೀ ಕೆ. ಅಪ್ಪಣಾಚಾರ್ಯ

ಕೃತಶ್ರೀಶಃ ಸಮುಪೇಕ್ಷಿತಭಾವಜಃ'' ಎಂದು ಹೇಳಿ ಗುರುರಾಜರ ಸ್ವರೂಪದ ಪರಿಚಯವನ್ನು ತಿಳಿಸಿ ಕೊಟ್ಟಿದ್ದಾರೆ. ರತ್ನಗಳನ್ನು ಮಾರುವ ಅಂಗಡಿಯಲ್ಲಿ ಅಜಿವಾನವನ್ನು ಬೇಡಿದರೆ ದೊರೆಯಲಾರದು. ಗುರುರಾಜರ ನಿಜವಾದ ಸಂಪತ್ತು ಭಗವಂತ ಹಾಗೂ ಜ್ಞಾನ, ಭಕ್ತಿ, ವೈರಾಗ್ಯಗಳು. ಈ ಭಾಗವತ ಸಂಪತ್ತನ್ನು ಅಪೇಕ್ಷಿಸಿ ಬಂದ ಜನರಿಗೆ ಅದನ್ನು ಕರುಣಿಸಿಕೊಡುವ ಕರುಣಾಳುಗಳು ಗುರುಸಾರ್ವಭೌಮರು, ಈ ವಿಷಯವನ್ನೇ ಗುರುಶ್ರೀಶವಿಠಲರು ತಮ್ಮ ಒಂದು ಕೃತಿಯಲ್ಲಿ ಸ್ಪಷ್ಟ ಪಡಿಸಿವರು :–

ನಿಷ್ಠೆ ಯಿಂದನುಸರಿಸೆ ಕಷ್ಟಗಳು ದೂರ ಮನೋ
ಭೀಷ್ಟಗಳ ಪೂರೈಪರೋ ॥
ಅಷ್ಟ ಸೌಭಾಗ್ಯವ ಕೊಟ್ಟು ಸುಜನರಿಗೆ ಶ್ರೀ
ವಿಷ್ಣು ದಾಸ್ಯವ ತೋರ್ಪರೋ..............

ಇಂಥಾ ಗುರುಸಾರ್ವಭೌಮರಲ್ಲಿ ಎಲ್ಲ ಹರಿದಾಸರು–"ಸಂಸಾರ ಸಾಗರದಿಂದ ಉದ್ಧರಿಸಿ, ಪಾರಮಾರ್ಥಿಕದತ್ತ ಎನ್ನ ಮನ ಸಾಗಿಸು'' ಎಂದೇ ಪ್ರಾರ್ಥಿಸಿರುವರು. ರಾಘವೇಂದ್ರ ಗುರುರಾಜರನ್ನು ಪ್ರಾರ್ಥಿಸುತ್ತಾ "ರಾಘವೇಂದ್ರಾ! ಭಯಂಕರವಾದ ಸಂಸಾರಸಾಗರದಿಂದ ನನ್ನನ್ನು ಉದ್ಧರಿಸು" ಎಂದು ಪ್ರಾರ್ಥಿಸಿರುವರು.

ಗುರುಜಗನ್ನಾಥದಾಸರು ಸಹ ತಮ್ಮ ಒಂದು ಕೃತಿಯಲ್ಲಿ:–

ಭಾವದ್ರವ್ಯ ಕ್ರಿಯಾದ್ವೈತ ಇದರನು
ಭಾವವ ತಿಳಿಯದೆ ನಿರುತ
ಸೇವಿಪ ಸಂತತ ಈ ವಿಧ ನರರನು
ದೇವರೆಂದನುದಿನ ಭಾವಿಸಿದೆನು ನಾ ॥
ರಾಘವೇಂದ್ರ ಗುರುರಾಯ ನೀ ವೇಗದಿ
ಪಿಡಿಯೆನ್ನ ಕೈಯ್ಯಾ
ಆಗಮ ಸಂಚಿತ ಭೋಗಗಳುಳ್ಳ ಭವ
ಸಾಗರದೊಳು ಬಿದ್ದೆ ಬ್ಯಾಗನೆ ನೀ ಬಂದು

–ಎಂದು ಗುರುರಾಜರನ್ನು ಪ್ರಾರ್ಥಿಸಿರುವರು. ಇದೇ ದಾಸರೇ ಮತ್ತೊಂದೆಡೆ

"ಎಷ್ಟುಪೇಳಲೆನ್ನ ಕಷ್ಟರಾಶಿಗಳನ್ನು
ಸುಟ್ಟುಬಿಡೋ ಸರ್ವೋತ್ಕೃಷ್ಟ ಮಹಿಮಗುರು''

–ಎಂದು ಹೇಳಿ ತಮ್ಮ ಕಷ್ಟ ಪರಂಪರೆಗಳನ್ನು ಸುಟ್ಟುಬಿಡುವಂತೆ ಪ್ರಾರ್ಥಿಸಿರುವರು. ಆದರೆ ಇಲ್ಲಿ ತಮಗೆ ಬಂದೊದಗಿದ ಆ ಕಷ್ಟಗಳ ಪಟ್ಟಿಯನ್ನಾಗಲಿ, ಸ್ವರೂಪವನ್ನಾಗಲಿ ವಿವರಿಸಿಲ್ಲ. ಮುಂದಿನ ಚರಣದಲ್ಲಿ "ಮೋಕ್ಷದಾಯಕ ಎನ್ನ ಈಕ್ಷಿಸಿ ಮನೋಗತಾಪೇಕ್ಷಾವ ಪೂರೈಸೊ ತ್ರ್ಯಕ್ಷಾದಿ ಸುರಪ್ರೀತ" ಎಂದು ಹೇಳಿ ತಮ್ಮಮನದ ಅಪೇಕ್ಷೆಯನ್ನು ಪೂರೈಸುವಂತೆ ಪ್ರಾರ್ಥಿಸಿರುವರು. ಇಲ್ಲಿಯೂ ಸಹ ತಮ್ಮ ಮನೋಭೀಷ್ಟದ ಸ್ವರೂಪವನ್ನು ಸೂಚಿಸದೆ, ಗುರುರಾಜರಿಗೆ ಮಾತ್ರ "ಮೋಕ್ಷದಾಯಕ'' ಎಂಬ ವಿಶೇಷಣವನ್ನು ಹಾಕಿ ಗುರುರಾಜರಿಗೇ ಎಚ್ಚರಿಕೆಯನ್ನಿತ್ತಿರುವರು. ಮೋಕ್ಷವೇ ತಮ್ಮ ಮನದಪೇಕ್ಷೆಯಾಗಿಯೂ ಅದಕ್ಕೆ ವಿಘ್ನಗಳಾಗಿರುವ ವಿಷಯ ಲೋಲುಪತೆ, ಮನೋನಿಗ್ರಹರಾಹಿತ್ಯ, ಅಜ್ಞಾನ, ಅಹಂಕಾರ, ಮಮತೆಗಳೇ ಕಷ್ಟ ಪರಂಪರೆಗಳನ್ನಾಗಿ ಸೂಚಿಸಿರುವರು.

ಇಂತು ಎಲ್ಲ ಹರಿದಾಸರು ರಾಘವೇಂದ್ರಗುರುಸಾರ್ವಭೌಮರನ್ನು ಜ್ಞಾನ–ಭಕ್ತಿ–ವೈರಾಗ್ಯ ಮೂ ರ್ತೀ ಭ ವಿ ಸಿ ದ ಹರಿಭಕ್ತಾಗ್ರಣಿಗಳನ್ನಾಗಿಯೂ, ಸುಜೀವಿಗಳನ್ನು ಸಂಸಾರ ಬಂಧನದಿಂದ ಉದ್ಧರಿಸಲು ಬದ್ಧಕಂಕಣರಾದವರನ್ನಾಗಿಯೂ ಕಂಡು, ಅವರಲ್ಲಿ ಭಗವದ್ಭಕ್ತಿ, ವಿಷಯ ವಿರಕ್ತಿಯನ್ನೇ ಬೇಡಿರುವರು.

ಜಯತು ಜಯಗುರುರಾಜ ಶುಭತಮ
ಜಯತು ಕವಿಜನಗೇಯ ಸುಂದರ
ಜಯತು ನಿಜಜನಜಾಲಪಾಲಕ ಜಯತು
ಕರುಣಾಳೋ
ಜಯತು ಸಜ್ಜನ ವಿಜಯದಾಯಕ
ಜಯತು ಕುಜನಾರಣ್ಯ ಪಾವಕ
ಜಯತು ಜಯಜಯ ದ್ವಿಜವರಾರ್ಚಿತಪಾದ
ಪಂಕೇಜ

★

## ಅನ್ನದಾನ ಯೋಜನೆ ವಿವರಗಳು

"ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ" ಎನ್ನುವ ಹೊಸ ಯೋಜನೆಯಲ್ಲಿ ತಿರುಮಲೆಗೆ ಬರುವ ಯಾತ್ರಿಕರಿಗಾಗಿ ಉಚಿತ ಭೋಜನ ನೀಡುವ ಕಾರ್ಯವನ್ನು ತಿ. ತಿ. ದೇ. ಆರಂಭಿಸಿದೆ. ಈ ಯೋಜನೆಯ ವಿವರಗಳು ಈ ರೀತಿ ಇವೆ–ಯಾವ ಭಕ್ತರೇ ಆಗಲಿ ಹತ್ತು ಲಕ್ಷ ರೂ ಗಳನ್ನು ದಾನ ನೀಡಿದಲ್ಲಿ ಅದಕ್ಕೆ ಸಮನಾದ ಅನುದಾನವನ್ನು ತಿ. ತಿ. ದೇ. ಗಳೂ ನೀಡಿ ಒಂದು ದತ್ತಿಯನ್ನು ಸ್ಥಾಪಿಸಿ, ಅದರ ವಾರ್ಷಿಕಬಡ್ಡಿ ಉತ್ಪನ್ನದಿಂದ ದಿನವೂ ಐದುನೂರು ಮಂದಿಗೆ ಉಚಿತ ಭೋಜನ ನೀಡಲಾಗುವುದು. ಈ ದಾನವು ಆದಾಯಕರ ಶಾಸನದ ಯು/ಎಸ್ 80 (ಜಿ) ಕಲಮಿನಂತೆ ಆದಾಯಕರ ವಿಮುಕ್ತವಾಗಿರುವುದು.

ದಾನಿಯ ಹೆಸರನ್ನು ಊಟದ ಕೊಠಡಿಯಲ್ಲಿ ಎದ್ದು ಕಾಣುವಂತೆ ಕಪ್ಪು ಹಲಗೆಯ ಮೇಲೆ ಬರೆಯಲಾಗುವುದು. ಹಾಗೂ ಉಚಿತ ಭೋಜನದ ಚೀಟಿಗಳ ಮೇಲೂ ಮುದ್ರಿಸಲಾಗುವುದು. ಜೊತೆಗೆ ವರ್ಷಕ್ಕೊಮ್ಮೆ ಮೂರು ದಿನಗಳ ಕಾಲ ದಾನಿ ಮತ್ತು ಅವರ ಕುಟುಂಬಕ್ಕೆ ತಿರುಮಲೆಯಲ್ಲಿ ಉಚಿತ ವಸತಿ ಹಾಗೂ ಮೂರು ದಿನವೂ ದೇವಾಲಯದಲ್ಲಿ ಆರತಿಯೊಡನೆ ದರ್ಶನಾವಕಾಶವನ್ನು ಏರ್ಪಡಿಸಲಾಗುವುದು.

ದೇಶದೊಳಗಿನ ಹಾಗೂ ವಿದೇಶಗಳ ಎಲ್ಲಾ ಮಾನವಸೇವಾ ಪ್ರೇಮಿ ಭಕ್ತರೂ ತಿ.ತಿ.ದೇ. ಗಳ ಈ ಯೋಜನೆಗೆ ಉದಾರವಾಗಿ ದಾನ ನೀಡುವುದರಿಂದ ಅತಿ ಹೆಚ್ಚು ಮಂದಿ ಯಾತ್ರಿಕರಿಗೆ ಭೋಜನಾವಕಾಶವುಂಟುಮಾಡಿ, ಅವರು ತಿರುಮಲೆಯಲ್ಲಿ ಅಶನ ಚಿಂತಾತುರರಾಗುವುದನ್ನು ತಪ್ಪಿಸಬೇಕೆಂದು ಈ ಮೂಲಕ ಬೇಡಲಾಗಿದೆ.

**ತಿ.ತಿ.ದೇ.**

# ಸಂಸ್ಕೃತಿ ಹಾಗೂ ಸ್ತ್ರೀ

ಹಿಂದೂ ಧರ್ಮ, ಮತ್ತು ಸಂಸ್ಕೃತಿಗಳು ಚಿರಂತನಚೈತನ್ಯಮಯವಾದುವು. ಒಡಗೂಡುವ ಉಪನದಿಗಳನ್ನೆಲ್ಲ ತನ್ನಲ್ಲಿ ಐಕ್ಯವಾಗಿಸಿಕೊಂಡು ಸ್ವಯಂಪೂರ್ಣವಾಗಿ ಮುಂದೆ ಪ್ರವಹಿಸುವ ಜೀವನದಿಯದು. ಈ ಜೀವನದಿಯ ಸುಧಾರಸವನ್ನುಂಡು ಅಸಂಖ್ಯಾತ ಉದಾತ್ತ ವ್ಯಕ್ತಿಗಳು ಬೆಳೆದು, ಆಧ್ಯಾತ್ಮಿಕ, ಸಾಂಸ್ಕೃತಿಕ ಜಗತ್ತಿನಲ್ಲಿ ಜನಸಾಮಾನ್ಯರ ಬಾಳಿಗೆ ಬೆಳಕು ನೀಡುವ ದಾರಿದೀಪಗಳಾಗಿದ್ದಾರೆ.

ಬಹು ಹಿಂದಿನಿಂದಲೂ, ವಿಧರ್ಮಗಳ, ಪರ ಸಂಸ್ಕೃತಿಗಳ ಬಿರುಗಾಳಿಯ ಧಾಳಿಗೆ ಸಿಕ್ಕಿದರೂ, ಈ ಸಂಸ್ಕೃತಿಯ ಜ್ಯೋತಿ ನಂದದಂತೆ ಮನೆಮನೆಯಲ್ಲೂ ಅದನ್ನು ಸಂರಕ್ಷಿಸಿದವರು ಮನೆಮನೆಯ ನಂದಾದೀಪವಾದ ಗೃಹಿಣಿಯರು. ಇಂದು, ಈ ವೈಜ್ಞಾನಿಕ ಯುಗದಲ್ಲಿ, ಹಲವು ಸಂಸ್ಕೃತಿಗಳು ಹಲವು ವಿಚಾರಗಳು, ಎಂದಿಗಿಂತಲೂ ಮಿಗಿಲಾಗಿ, ಯುವಜನಾಂಗವನ್ನು, ಭಾರತದ ಭವ್ಯ ಭವಿಷ್ಯವನ್ನು–ಪ್ರಭಾವಿಸುತ್ತಿರುವ ಈ ಕಾಲದಲ್ಲಿ, ನಮ್ಮ ಸಂಸ್ಕೃತಿಯನ್ನು ಮನೆಮನೆಯಲ್ಲೂ ಸಂರಕ್ಷಿಸಿ, ಪೋಷಿಸಿ ಬೆಳಸುವ ಹೊಣೆ ಗೃಹಿಣಿಯರದಾಗಿದೆ. 'ಮನೆಯ ಮೊದಲ ಪಾಠಶಾಲೆ ತಾಯ ಮೊದಲ ಗುರುವು' ಸಂಸ್ಕೃತಿಯ ಮೂಲ ಪಾಠವನ್ನು ತಾಯಿ ತನ್ನ ಮಕ್ಕಳಿಗೆ ಕಲಿಸಬೇಕಾಗಿದೆ.

ನಮ್ಮ ಸಂಸ್ಕೃತಿಯ ಬಹು ಮುಖ್ಯ ಭಾಗ, ಅದರ ಮೂಲ ಉಗಮ, ದೃಢವಾದ ತಾತ್ತ್ವಿಕ ತಳಹದಿಯನ್ನುಳ್ಳ ನಮ್ಮ ಧರ್ಮ, ದೈವಭಕ್ತಿ ಧರ್ಮದ ಅಡಿಗಲ್ಲು. ತಾಯಹಾಲು ಮಕ್ಕಳಿಗೆ ರಕ್ತಗತವಾಗುವಂತೆ ದೈವಭಕ್ತಿಯೂ ಮಕ್ಕಳ ಹೃದಯ ಮನಸ್ಸುಗಳನ್ನು ತುಂಬಿ ಬೆಳೆಯಬೇಕು. ಶ್ರೀನಿವಾಸನೋ, ರಾಮನೋ, ಕೃಷ್ಣನೋ, ಶಿವನೋ, ದೇವಿಯೋ, ಮನೆಗೊಂದು ಅಧಿದೈವತವಿರಬೇಕು. ಆ ದೈವತಕ್ಕೆ ಮನೆಯ ಒಂದು ಭಾಗದಲ್ಲಿ ಸ್ಥಾನವಿರಬೇಕು. ದಿನವೂ ಮಕ್ಕಳು ಸ್ನಾನಾನಂತರ ಕೆಲವು ಕ್ಷಣಗಳನ್ನಾದರೂ–ಒಂದು ಸ್ತೋತ್ರ, ಒಂದು ಹೂ, ಒಂದು ನಮಸ್ಕಾರ ಸಾಕು; ದೇವರಿಗರ್ಪಿಸುವ ರೂಢಿ ಬಹು ಹಿಂದಿನಿಂದಲೂ ನಮ್ಮಲ್ಲಿ ಪ್ರಚಾರದಲ್ಲಿದೆ. ಎಳೆಯ ಮಕ್ಕಳು ತಾಯಿಯನ್ನು ಬಿಟ್ಟು ಎಲ್ಲಿಗೂ ಹೋಗಲಾರದರಲ್ಲವೆ? ಆ ಮಕ್ಕಳಿಗೆ ದೇವರ ಸ್ತೋತ್ರ, ಹಾಡುಗಳನ್ನು ನಿತ್ಯವೂ ಹೇಳಿಕೊಡುತ್ತಿದ್ದರೆ, ಮಕ್ಕಳಿಗೆ ದೈವಭಕ್ತಿ ಹೃದಯಗತವಾಗಿ ಅವರ ಮುಂದಿನ ಬಾಳಿನಲ್ಲಿ ಎಲ್ಲ ಪರಿಸ್ಥಿತಿಗಳಲ್ಲೂ ಚೈತನ್ಯ ನೀಡುವ ಸುಪ್ತ ಶಕ್ತಿಯಾಗುತ್ತದೆ. ಅಷ್ಟೇ ಅಲ್ಲ, ಇದರಿಂದ ಮಕ್ಕಳಲ್ಲಿ ಚಿತ್ತೈಕಾಗ್ರತೆ, ಬುದ್ಧಿಪಟುತ್ವ, ಬಹುಬೇಗ ಎಲ್ಲವನ್ನೂ ಮನನ ಮಾಡುವ ಶಕ್ತಿಗಳೂ ಬೆಳೆಯುತ್ತವೆ. ಮಕ್ಕಳ ವಿದ್ಯಾಭ್ಯಾಸದಲ್ಲೂ ಇದು ಅನುಕೂಲಕರ.

ಚಿಕ್ಕ ಮಕ್ಕಳಿಗೆ ಕತೆಗಳೆಂದರೆ ಬಹು ಪ್ರೀತಿ. ಮಕ್ಕಳ ಮೇಣದಂತಹ ಮನಸ್ಸನ್ನು ಕರಗಿಸಿ ರೂಪಿಸಬಲ್ಲ ಶಕ್ತಿ ಇನ್ನೂ ಅಧಿಕಗೊಳ್ಳುತ್ತದೆ. ಮಹಾಭಾರತ, ರಾಮಾಯಣ, ಮುಂತಾದ ಪೌರಾಣಿಕ ಕತೆಗಳನ್ನಲ್ಲದೆ, ನಮ್ಮ ದೇಶದ ವೀರರ, ಕವಿಗಳ, ಋಷಿಗಳ ಕತೆಗಳನ್ನು ಮಕ್ಕಳಿಗೆ ಆಕರ್ಷಣೀಯವಾಗಿ, ಮನಮುಟ್ಟುವಂತೆ ಹೇಳುವ ಕಲೆಯನ್ನು ತಾಯಿ ರೂಢಿಸಿಕೊಳ್ಳಬೇಕು. ಅವು ಎಳೆಯ ಮಕ್ಕಳ ಬೆಳೆಯುವ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವ ಬೀರುತ್ತವೆ. ಇಂದಿನ ವಿಜ್ಞಾನಯುಗಕ್ಕೆ ಹಳೆಯ ಆದರ್ಶಗಳು ಸಲ್ಲುವವೆ ಎಂಬ ಸಂಶಯ ಬೇಡ. ನಿತ್ಯ ಸತ್ಯಗಳು ಎಲ್ಲಕಾಲಕ್ಕೂ ಅಳವಡುತ್ತವೆ. ಆಧುನಿಕ ಭಾರತದಲ್ಲೂ ಆದರ್ಶ ವ್ಯಕ್ತಿಗಳ ಆದರ್ಶ ಚಾರಿತ್ರಗಳಿಗೆ ಕೊರತೆಯಿಲ್ಲ. ರಾತ್ರಿ ಮಲಗುವ ವೇಳೆ ಇಂತಹ ಕತೆಗಳನ್ನು ಹೇಳುತ್ತಿದ್ದರೆ ಮಕ್ಕಳ ಸುಪ್ತ ಮನಸ್ಸು ಅವನ್ನು ಸಂಪೂರ್ಣವಾಗಿ ಗ್ರಹಿಸಿ ಬಿಡುತ್ತವೆ. ತಮಗೆ ಕತೆ ಹೇಳಲು ಬರದಿದ್ದರೂ, ಮಕ್ಕಳಿಗಾಗಿಯೇ ಬರೆದ ಇಂತಹ ಪುಸ್ತಕಗಳು ಈಗ ಎಲ್ಲ ಭಾಷೆಗಳಲ್ಲೂ ಹೇರಳವಾಗಿ ದೊರೆಯುತ್ತವೆ. ಅವುಗಳನ್ನು ತಂದು ಓದಲೂ ಬಹುದು. ಒಟ್ಟಿನಲ್ಲಿ ವೈವಿಧ್ಯಪೂರ್ಣವೂ, ಅತಿ ಶ್ರೇಷ್ಠವೂ ಆದ ನಮ್ಮ ಸಂಸ್ಕೃತಿ ಧರ್ಮ ಪರಂಪರೆಗಳ ಪರಿಚಯ ಮಕ್ಕಳಿಗೆ ಚೆನ್ನಾಗಿ ಆಗಬೇಕು.

ದೇವಸ್ಥಾನಗಳು ಸಂಸ್ಕೃತಿಯ ಪ್ರತೀಕಗಳು. ಹಿಂದೂ ಸಂಸ್ಕೃತಿ ಅರಳಿ ಬೆಳೆದಿರುವುದೇ ದೇಗುಲಗಳ ಮಡಿಲಲ್ಲಿ. ತಮ್ಮ ಮನೆಯ ಹತ್ತಿರವಿರುವ ತಮ್ಮ ಅಧಿದೈವತದ ದೇವಾಲಯಕ್ಕೆ ವಾರಕ್ಕೊಮ್ಮೆಯಾದರೂ, ಗೃಹಿಣಿ ತನ್ನ ಮಕ್ಕಳೊಡನೆ ಹೋಗಿ ಬರುವ ಅಭ್ಯಾಸವಿಟ್ಟುಕೊಳ್ಳುವುದು ಉತ್ತಮ. ಈಗಂತೂ ಪ್ರವಾಸೋದ್ಯಮ ಬಹುಮುಖವಾಗಿದೆ. ವರುಷಕ್ಕೊಮ್ಮೆ ಯಾತ್ರಾಸ್ಥಳಗಳಿಗೆ ಭೇಟಿಕೊಡುವುದರಿಂದ ಮಕ್ಕಳಿಗೆ ನಮ್ಮ ಭವ್ಯ ಸಂಸ್ಕೃತಿಯ ಕಿರು ದರ್ಶನ ದೊರೆಯುತ್ತದೆ.

ಮತ್ತೊಂದು ಮುಖ್ಯ ವಿಷಯವೆಂದರೆ, ಗೃಹಿಣಿ, ತಮ್ಮ ಸಂಪ್ರದಾಯ ಪದ್ಧತಿಗಳಲ್ಲಿರುವ ಧಾರ್ಮಿಕ, ಸಾಮಾಜಿಕ ಹಬ್ಬಗಳನ್ನು ತಪ್ಪದೇ ಆಚರಿಸುವುದು. ಇಂದಿನ ವಿಜ್ಞಾನಯುಗದಲ್ಲಿ ಇವುಗಳ ಸಮಂಜಸತೆಯ ಬಗ್ಗೆ ಸಂಶಯ ಬೇಡ. ನಮ್ಮ ಹಿರಿಯರು ಪ್ರತಿಯೊಂದು ಹಬ್ಬದ ಆಚರಣೆಯ ಹಿಂದೆಯೂ ವಿಶಾಲವಾದ ಅರ್ಥವನ್ನು ಕಂಡಿದ್ದಾರೆ. ಉದಾಹರಣೆಗೆ ಸಂಕ್ರಾಂತಿಯ ಎಳ್ಳುಬೆಲ್ಲ, ರಥಸಪ್ತಮಿಯ ಎಕ್ಕದೆಲೆಯ ಸ್ನಾನ, ಯುಗಾದಿಯ ಬೇವುಬೆಲ್ಲ, ದೀಪಾವಳಿಯ ದೀಪಾರಾಧನೆ-ಇತ್ಯಾದಿ ಋತುಮಾನವನ್ನನುಸರಿಸಿ, ನಮ್ಮ ದೈಹಿಕ ಆರೋಗ್ಯಕ್ಕೂ ಇದು ಸಹಕಾರಿ. ಮನೆಯಲ್ಲಿ ಸಂಭ್ರಮ, ಮನದಲ್ಲಿ ಸಂತಸ. ಪ್ರತಿ

ಶ್ರೀಮತಿ ಸುಮನ ಬದರೀನಾಥ್

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಸ್ವಕೀಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇ. ತಿರುಪತಿ.**

ಯೊಂದು ಹಬ್ಬವನ್ನಾಚರಿಸುವಾಗಲೂ, ಮಕ್ಕಳಿಗೆ ಅದರ ಹಿಂದಿನ ಅರ್ಥವನ್ನೂ ವಿವರಿಸುವುದು ಒಳ್ಳೆಯದು. ಇದರಿಂದ ಅಂಧಾನುಕರಣೆ ತಪ್ಪಿ ವಿಶ್ವಾಸಪೂರ್ವಕ ಭಾವ ಆಸಕ್ತಿ ಬೆಳೆಯುತ್ತದೆ.

ಮನುಷ್ಯನ ದೈಹಿಕ, ಮಾನಸಿಕ ಆರೋಗ್ಯಕ್ಕಾಗಿ ಹಿಂದಿನ ಋಷಿಗಳು ರೂಪಿಸಿದ ದಿವ್ಯಮಾರ್ಗವೇ ಆಯುರ್ವೇದ. ಇದು ಕೇವಲ ರೋಗಕ್ಕೆ ನೀಡುವ ಔಷಧವಲ್ಲ. ಜೀವನದ ಒಂದು ಸೂತ್ರ. ವೇದ ಋಷಿಗಳು ಅಂದೇ ಸಾಕ್ಷಾತ್ಕರಿಸಿಕೊಂಡಿದ್ದ ನಿತ್ಯ ಸತ್ಯಗಳನ್ನು ವಿಜ್ಞಾನ ಈಗ ಹೊಸದಾಗಿ ಸಂಶೋಧಿಸಿ ಕಂಡು ಹಿಡಿಯುತ್ತದೆ. ಪದ್ಮಾಸನ ಕುಳಿತುಕೊಳ್ಳಲು ಸರಿಯಾದ ರೀತಿಯಾಗಿರುವಂತೆ, ಸೂರ್ಯಸ್ನಾನದಿಂದ ಸಕಲರೋಗಗಳೂ ಪರಿಹಾರವಾಗುತ್ತವೆಯಂತೆ. ನಾರು ಬೇರು ಮೂಲಿಕೆಗಳ, ಗಾಳಿ ನೀರು ಮಣ್ಣುಗಳ ಪ್ರಕೃತಿ ಚಿಕಿತ್ಸೆಯನ್ನು ಇದೀಗ ಹೊಸದಾಗಿ ಪ್ರಾರಂಭಿಸುತ್ತಿದ್ದಾರೆ. ಪ್ರತಿಯೊಬ್ಬ ಗೃಹಿಣಿಯೂ ಆಯುರ್ವೇದದ ಕೆಲವು ಸುಲಭ ಚಿಕಿತ್ಸೆಗಳನ್ನು ಅರಿತು ಆಚರಣೆಯಲ್ಲಿಟ್ಟುಕೊಳ್ಳಬೇಕು.

ಗೃಹಿಣಿಯರು ಪಾಶ್ಚಾತ್ಯ ಸಂಸ್ಕೃತಿಯ ಹೊರಗಣ ಆಡಂಬರಕ್ಕೆ ಮರುಳಾಗದೆ, ನಮ್ಮ ಸಂಸ್ಕೃತಿಯ ಒಳತಿರುಳನ್ನು ಅರಿತುಕೊಂಡು, ನಡೆನುಡಿಗಳಲ್ಲಿ, ಊಟ ಉಪಚಾರಗಳಲ್ಲಿ, ಉಡುಗೆ ತೊಡುಗೆಗಳಲ್ಲಿ ನಮ್ಮ ಸಂಸ್ಕೃತಿಯ ರೀತಿನೀತಿಗಳನ್ನು ಮನೆಗಳಲ್ಲಿ ಆಚರಣೆಗೆ ತರಬೇಕು. ಇಂತಹ ವಾತಾವರಣದಲ್ಲಿ ಬೆಳೆಯುವ ಮಕ್ಕಳು ತಾವೂ ಅದನ್ನೇ ಅನುಸರಿಸುತ್ತಾರೆ. ಸಂಸ್ಕೃತಿಯು ಸುಗಮ ಪ್ರವಾಹ ಅಡೆತಡೆಯಿಲ್ಲದೆ ಮುಂದೆ ಹರಿಯುತ್ತದೆ. ಇಲ್ಲಿ ಹೊಸ ನೀರಿಗೂ ಅವಕಾಶವಿದೆ. ಆದರೆ ನದಿ ತನ್ನ ಮೂಲ ಉಗಮವನ್ನು ಮರೆಯದಂತೆ ನಾವೂ ನಮ್ಮ ಪ್ರಾಚೀನ ಸಂಸ್ಕೃತಿಯನ್ನು ಮರೆಯಲಾಗದು. ಮಕ್ಕಳು ನಮ್ಮ ಸಂಸ್ಕೃತಿಯ ಉದಾತ್ತತೆಯನ್ನು ಮನಗಂಡು, ಅಂತಹ ಸಂಸ್ಕೃತಿಯನ್ನು ಪಡೆದಿರುವುದಕ್ಕಾಗಿ ಹೆಮ್ಮೆ ತಾಳುವಂತಾಗಬೇಕು. ಅವರು ಹೋದೆಡೆಯಲ್ಲೆಲ್ಲ, ಈ ಸಂಸ್ಕೃತಿಯ ಪ್ರಚಾರಕರಾಗಬೇಕು. ಮನೆಮನೆಯಲ್ಲೂ ನಮ್ಮ ಉದಾತ್ತ ಸಂಸ್ಕೃತಿಯ ದೀಪವನ್ನು ಪ್ರಜ್ವಲಿಸಿ ಬೆಳಗಿಸುವ ಹೊಣೆ ಗೃಹಲಕ್ಷ್ಮಿಯರಾದ ಗೃಹಿಣಿಯರದು.

---

(14ನೇ ಪುಟದಿಂದ)

ಇಂದಿರಾ ಚಂಚಲಾಪಾಂಗ ನೀರಾಜಿತಂ
ಮಂದರೋದ್ಧಾರಿ ವೃತ್ತೋದ್ಭುಜಾ
ಭಾಗಿನಮ್ ॥

ಆನಂದ ಮುಕುಂದ ಅರವಿಂದ ನಯನ
ಆನಂದ ತೀರ್ಥಪರಾನಂದ ವರದ ॥
ಸುಂದರ ಮಂದಿರ ಗೋವಿಂದ ವಂದೇ
ಆನಂದತೀರ್ಥ ಪರಾನಂದ ವರದ ॥
ಚಂದ್ರ ಸುರೇಂದ್ರ ಸುವಂದಿತ ವಂದೇ
ಆನಂದತೀರ್ಥ ಪರಾನಂದ ವರದ ॥

ಗೋಪೀಚಂದನದ ಮುದ್ದೆಯನ್ನು ಹೊತ್ತುಕೊಂಡ ಆ ಯತಿವರ್ಯರ ಹೆಸರು ಆನಂದತೀರ್ಥ. ಇವರ ಮಹದಾನಂದಕ್ಕೆ ಕಾರಣವೇನೆಂದು ವ್ಯಾಪಾರಿಗಳಿಗರ್ಥವಾಗಲಿಲ್ಲ. ಅವರು ದ್ವಾರಕೆಯ ಕಡೆಯಿಂದ ಸರಕು ತಂದವರು; ತಮ್ಮಲ್ಲೇ ಇದ್ದ ಅಮೂಲ್ಯವಸ್ತುವನ್ನು ಅರ್ಥಮಾಡಿಕೊಳ್ಳದ ಜನ. ಯಾವ ಬೆಲೆತೆತ್ತರೂ ದೊರಕದ ವಸ್ತು ದೋಣಿಯಲ್ಲಿತ್ತೆಂದು ಅವರರಿಯರು. ಆನಂದತೀರ್ಥರು ಧ್ಯಾನದೃಷ್ಟಿಯಿಂದ ಕಂಡುಕೊಂಡಿದ್ದಾರೆ- ಆ ಮಣ್ಣಿನ ಮುದ್ದೆಯಲ್ಲಿ ಮುಕುಂದನಿದ್ದಾನೆಂದು; ರುಕ್ಮಿಣೀಕರಕಮಲಾರ್ಚಿತ ಶ್ರೀ ಕೃಷ್ಣನಿದ್ದಾನೆಂದು !! ದ್ವಾರಕೆಯಿಂದ ಬಂದ ದ್ವಾರಕಾಧೀಶನನ್ನು ಆನಂದತೀರ್ಥರು ಪರಮಗೌರವದಿಂದ ಸ್ವಾಗತಿಸುತ್ತಿದ್ದಾರೆಂದು ವ್ಯಾಪಾರಿಗಳೇನು ಬಲ್ಲರು? "ಅಮಂದ ಗುಣಸಾರೋಪಿ ಮಂದ-ಹಾಸೇನ ವೀಕ್ಷಿತಃ" ಎಂಬಂತಹ ಲಾವಣ್ಯಮೂರ್ತಿ ಮಣ್ಣಿನಲ್ಲಿ ಹುದುಗಿದ್ದಾನೆಂದು ಸಾಮಾನ್ಯ ಜನಕ್ಕೇನು ಗೊತ್ತು! ವಿಧಿಭವಮುಖಸುರಸತತ ಸುವಂದಿತ ರಮಾಮನೋವಲ್ಲಭನ ಪುಣ್ಯಪಾದ ಸೋಕಿತೆಂಬ ಆನಂದಕ್ಕೆ ಇತಿಮಿತಿಯುಂಟೆ? ಲಾಭೈಕ ದೃಷ್ಟಿಯುಳ್ಳ ಜನಕ್ಕೆ ಅಪರೋಕ್ಷಜ್ಞಾನಿಗಳ ವ್ಯವಹಾರವೇನು ತಿಳಿದೀತು? ಯಾರಿಂದ ವಿಶ್ವವೆಲ್ಲವೂ ಧರಿಸಲ್ಪಟ್ಟಿದೆ ಆತನನ್ನು ತಲೆಯ ಮೇಲೆ ಧರಿಸಿದಾತನ ಭಾಗ್ಯವೇ ಭಾಗ್ಯ !!

ವ್ಯಾಪಾರಿಗಳು ನೋಡುತ್ತಿದ್ದಂತೆಯೇ ಯತಿಗಳು ಆ ಗೋಪೀಚಂದನದ ಮುದ್ದೆಯನ್ನು ಒಂದು ಬಂಡೆಯಮೇಲಿಟ್ಟು ಒಡೆದರು. ಮಣ್ಣು ಇಬ್ಭಾಗವಾಯ್ತು. ಅದರ ನಡುವೆ ಕಡೆಗೋಲ ಕೃಷ್ಣ-ಬಾಲಮುಕುಂದ-ಕಂಡುಬಂದ. ವ್ಯಾಪಾರಿಗಳಿಗಂತೂ ಮಹದಾಶ್ಚರ್ಯ. ಪೂಜ್ಯರು ಪ್ರಾಣದಾನ ಮಾಡಿದ್ದೇ ಅಲ್ಲದೆ ಭುವನೈಕಪೂಜ್ಯನೂ – ಜಗನ್ಮೋಹನಾಕಾರನೂ ಆದ ಶ್ರೀಕೃಷ್ಣನ ದರ್ಶನವನ್ನೂ ಮಾಡಿಸಿದರೆಂದು ಅವರ ಹಿಗ್ಗು ಹೇಳತೀರದು. ಅದೇ ಕೃಷ್ಣನೇ ಈಗ ಉಡುಪಿಯಲ್ಲಿ ಸುಪ್ರತಿಷ್ಠಿತನಾಗಿ, ಅಷ್ಟಮಠಾಧೀಶರಾರಾಧ್ಯಮೂರ್ತಿಯಾಗಿ ಭಕ್ತಕಲ್ಪದ್ರುಮದಂತೆ – ಭಾಗ್ಯದ ಸುರಧೇನುವಿನಂತೆ ರಾರಾಜಿಸುತ್ತಿರುವುದು.

ಆಚಾರ್ಯ ಆನಂದತೀರ್ಥರು ಮಣ್ಣಿನಲ್ಲಿದ್ದ ಮುಕುಂದನನ್ನು ಶಿರಸಾಧರಿಸಿ, ಭಕ್ತ್ಯುದ್ರೇಕದಿಂದ ಹಾಡಿದ ಆಶುಕವಿತಾಧಾರೆ ಹನ್ನೆರಡು ಅಧ್ಯಾಯಗಳಲ್ಲಡಕವಾಗಿದೆ. ದ್ವಾದಶ ಸ್ತೋತ್ರವೆಂದು ಪ್ರಸಿದ್ಧವಾಗಿರುವ ಈ ಶ್ಲೋಕಗಳು ಭಕ್ತಿ ಮಂದಾಕಿನಿಯ ಲೋಲಲಹರಿಗಳಂತಿವೆ. ನರ್ತನಕ್ಕೆ ಹೊಂದುವಂತೆ ಲಯಬದ್ಧವಾದ ಈ ಛಂದೋಮಯಿವಾಣಿ ಇಷ್ಟಾರ್ಥದಾಯಕ ಸ್ತೋತ್ರರತ್ನವಾಗಿದೆ. ಒಂದೊಂದು ಅಧ್ಯಾಯದಲ್ಲಿ ಒಂದೊಂದು ಬಗೆಯ ಕಾವ್ಯ ವೈಖರಿಯಿಂದ ಕಂಗೊಳಿಸುವ ಈ ಕವಿವಾಣಿ ಆಹ್ಲಾದಗುಣ ಭೂಯಿಷ್ಠವೂ ಹೌದು, ಆನಂದದಾಯಕವೂ ಹೌದು. ಆನಂದತೀರ್ಥರೇ ಅಪ್ಪಣೆ ಕೊಡಿಸಿರುವಂತೆ

ಹರಿರೇವಪರಃ । ಹರಿರೇವ ಗುರುಃ
ಹರಿರೇವ ಜಗತ್ ಪಿತೃ ಮಾತೃ ಗತಿಃ ॥

---

# ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

–ತಿ. ತಿ. ದೇ.

---

( 16ನೇ ಪುಟದಿಂದ )

ದಿಂದ ತಮ್ಮ ಸಂಶಯವನ್ನು ಪರಿಹಾರ ಮಾಡಿಕೊಂಡರಂತೆ.

ಆಚಾರ್ಯರು ಪರಮವೈರಾಗ್ಯವನ್ನು ತಾಳಿ ಸನ್ಯಾಸಿಗಳಾದರು. ಇವರ ಜ್ಞಾನ ಭಂಡಾರವನ್ನು ಇವರಿಂದ ರಚಿತವಾದ "ಮಂದನಂದನಿ" ಎಂಬ ಭಾಗವತ ಸಪ್ತಮಸ್ಕಂಧದ ವ್ಯಾಖ್ಯಾನದಲ್ಲಿ ಕಂಡು ಸಂತುಷ್ಟರಾದ ಶ್ರೀ ರಾಯರಮಠದ ಪೀಠಾಧಿಪತಿಗಳಾಗಿದ್ದ ಶ್ರೀ ಭುವನೇಂದ್ರ ತೀರ್ಥಶ್ರೀಪಾದಂಗಳವರು ಇವರಿಗೆ ಸನ್ಯಾಸಾಶ್ರಮವನ್ನು ಕೊಟ್ಟು "ಶ್ರೀವ್ಯಾಸತತ್ತ್ವಜ್ಞ" ರೆಂದು ನಾಮಕರಣ ಮಾಡಿದರು. ಈ ಮಹನೀಯರು ಮುಮುಕ್ಷುಗಳ ಉಪಕಾರಕ್ಕಾಗಿ (1) ಮಾನಸಸ್ಮೃತಿ, (2) ಮಂದನಂದಿನಿ, (3) ಗಾಯತ್ರಿಸಾರಸಂಗ್ರಹ, (4) ಉಭಯನಾಚಿತಿ, (5) ಸುಧಾದ್ಯುಕ್ತ ರಹಸ್ಯ (6) ನ್ಯಾಯಾಮೃತಮಕ್ಷಿಕಾವ್ಯಜನ, ( ) ಚಂದ್ರಿಕಾಶರದಾಗಮ, (8) ಅದ್ವೈತಿ ಕುಟ್ಟನ (9) ನ್ಯಾಯದಮನ, (10) ಕುಲಿಶ, (11) ಗುರುಪ್ರಭಾ, (12) ಲಘುಪ್ರಭಾ (13) ರಸರಂಜನೀ–ಇತ್ಯಾದಿ ಗ್ರಂಥಗಳನ್ನು ಬರೆದಿರುವುದಲ್ಲದೆ, ಅಸಂಖ್ಯಾತ ದೇವರ ನಾಮಗಳನ್ನು ಕನ್ನಡದಲ್ಲಿ ರಚಿಸಿ ಪಂಡಿತಪಾಮರರೆಲ್ಲರನ್ನೂ ಉದ್ಧಾರ ಮಾಡಿರುತ್ತಾರೆ. ಇಷ್ಟಿದ್ದರೂ ತಾವು ಸ್ವಲ್ಪವೂ ಗರ್ವಪಡದೆ "ವೇದ ಮೊದಲಾದಾಗಮಕಗೋಚರನೆ। ತೊದಲು ನುಡಿಗಳಿಂದ ತುತಿಪೆನಯ್ಯಾ" "ಪರಮ ಪಾವನ ಮೂರ್ತಿ ಹರಿಯೇ ನೀನಯ್ಯಾ। ಪರಮಪಾತಕಿಯೋ ನಾಧರೆಯೊಳಗೆಲ್ಲಾ" ಎಂದು ತಮ್ಮದೆಲ್ಲವನ್ನೂ ಶ್ರೀಹರಿಗೆ ಅರ್ಪಿಸಿ ಅಹಂಕಾರ ಖಂಡನೆಯನ್ನು ಮಾಡಿಕೊಂಡಿದ್ದಾರೆ. ಇವರ ಮಹಿಮೆಗಳನ್ನು ಅಪರೋಕ್ಷ ಜ್ಞಾನಿಗಳಾದ ಗೋಪಾಲದಾಸರೂ ಮತ್ತು ಅವರ ನಾಲ್ವರು ತಮ್ಮಂದಿರೂ, ಜಗನ್ನಾಥ ದಾಸರೇ ಮೊದಲಾದವರು ಕೊಂಡಾಡಿದ್ದಾರೆ.

ವ್ಯಾಸತತ್ತ್ವಜ್ಞರು ಈ ಜನ್ಮದಲ್ಲಿ ತೊಂಭತ್ತಾರು ವರ್ಷಗಳವರೆಗೆ ಈ ಭೂಮಿಯನ್ನು ಅಲಂಕರಿಸಿ ಲೋಕಪಾವನ ಕರ್ತವ್ಯದಲ್ಲಿ ತೊಡಗಿದ್ದು, ಶಾಲಿವಾಹನ ಶಕ 1722ನೇ ರೌದ್ರಿ ನಾಮ ಸಂ॥ (ಕ್ರಿ.ಶ. 1800) ಶ್ರಾವಣ ಬಹುಳ ಅಷ್ಟಮಿ (ಕೃಷ್ಣಾಷ್ಟಮಿ) ಯಂದು ವೇಣಿ ಸೋಮಪುರದಲ್ಲಿ ಶ್ರೀವೇಣುಗೋಪಾಲ ಕೃಷ್ಣನ ಸನ್ನಿಧಿಯಲ್ಲಿ ಬೃಂದಾವನಸ್ಥರಾದರು.

ಈ ಮಹನೀಯರ ಬೃಂದಾವನವು ವೇಣೀಸೋಮಪುರದಲ್ಲಿದ್ದು ಪ್ರತಿವರ್ಷವೂ ಅಪಾರವಾದ ಭಕ್ತಸ್ತೋಮವು ಅಲ್ಲಿ ಸೇರಿ ಅವರ ಆರಾಧನೆಯನ್ನು ಬಹಳ ವಿಜೃಂಭಣೆಯಿಂದ ಮಾಡುತ್ತಾ ಕೃತಾರ್ಥರಾಗುತ್ತಿದ್ದಾರೆ.

*

## ಗೃಹಲಕ್ಷ್ಮಿ

# ಮಹಾಲಕ್ಷ್ಮೀ



ಪದ್ಮಾಲಯಾಂ ಪದ್ಮಕರಾಂ
ಪದ್ಮಪತ್ರ ನಿಭೇಕ್ಷಣಾಮ್ ।
ವಂದೇ ಪದ್ಮಮುಖೀಂ ದೇವೀಂ
ಪದ್ಮನಾಭ ಪ್ರಿಯಾಮಹಂ ॥

ಆದಿಶಕ್ತಿ ದೇವಿಯು ಎಲ್ಲ ಶಕ್ತಿಗಳ ಮೂಲ ಮಹಾಲಕ್ಷ್ಮಿ ಎಂದಾದರೂ, ಆಕೆಯನ್ನು ಶಕ್ತಿ ತ್ರಯಗಳಲ್ಲಿ ಒಬ್ಬಳು ಎಂದು ಹೇಳಲಾಗುತ್ತದೆ. ಈಕೆಯೇ ಸರ್ವೋತ್ಕೃಷ್ಟ ಪರಾಶಕ್ತಿಯಾಗಿದ್ದಾಳೆ. ಸಂಪೂರ್ಣ ಜಗತ್ತು, ವಿಶ್ವ, ಈಕೆಯಲ್ಲಿ ಪ್ರಕಟವಾಗಿದೆ. ಈಕೆಯು ಸಚ್ಚಿದಾನಂದ ಮಯಿಯಾದ ಸಾಕ್ಷಾತ್ ಪರಮೇಶ್ವರಿಯಾಗಿದ್ದಾಳೆ. ಈಕೆಯು ಅವ್ಯಕ್ತರೂಪದಲ್ಲಿ ಸರ್ವತ್ರ ವ್ಯಾಪಕಳಾಗಿದ್ದರೂ, ಭಕ್ತರ ಮೇಲೆ ಅನುಗ್ರಹ ತೋರಲು ಈಕೆಯು ದಿವ್ಯ ಚಿನ್ಮಯ ಸಗುಣ ರೂಪದಲ್ಲಿ ವಿರಾಜಮಾನಳಾಗಿರುತ್ತಾಳೆ. ಈಕೆಯು ನಿತ್ಯ ಸನಾತನಳಾಗಿದ್ದರೂ, ಲೀಲಾ ವಿನೋದಕ್ಕಾಗಿ ಅನೇಕ ರೂಪಗಳಲ್ಲಿ ದರ್ಶನವನ್ನು ನೀಡುವಳು. ದೇವಗಣ, ಮನುಷ್ಯಗಣ, ಪಶುಪಕ್ಷಿಗಳು–ಇವೆಲ್ಲವುಗಳ ಪುರುಷವಾಚಿಯು ಪರಮಾತ್ಮಸ್ವರೂಪಿಯಾದ ಶ್ರೀಹರಿಯಾಗಿರುವನು; ಸ್ತ್ರೀ ವಾಚಿಯಾಗಿರುವುದು ಮಹಾಲಕ್ಷ್ಮಿಯಾಗಿರುತ್ತಾಳೆ.

ದೇವತಿರ್ಯಙ್ ಮನುಷ್ಯಾದೌ
ಪುನ್ನಾಮಾ ಭಗವಾನ್ ಹರಿಃ ।
ಸ್ತ್ರೀನಾಮ್ನೀ ಶ್ರೀಶ್ಚ ವಿಜ್ಞೇಯ
ನಾನಯೋರ್ವಿದ್ಯತೇ ಪರಮ್ ॥
(ವಿಷ್ಣುಪುರಾಣ 1/8/35)

ಮಹಾಲಕ್ಷ್ಮಿಯು ಜಗಜ್ಜನನಿಯಾಗಿರುವಳು. ಬ್ರಹ್ಮ, ವಿಷ್ಣು ಮತ್ತಿತರ ದೇವತೆಗಳು ಈಕೆಯ ಸ್ವರೂಪದಿಂದಲೆ ಪ್ರಕಟಗೊಳ್ಳುವರು. ತನ್ನ ಸ್ವ–ಸ್ವರೂಪದಿಂದ ಈಕೆಯು ಬ್ರಹ್ಮ, ವಿಷ್ಣು–ಇತ್ಯಾದಿಗಳ ಸೇವೆಯಲ್ಲಿ ನಿರತಳಾಗಿರುತ್ತಾಳೆ.

ಈಕೆಯು ಎರಡು ಪ್ರಧಾನ ರೂಪಗಳಲ್ಲಿ ಅಭಿವ್ಯಕ್ತಗೊಳ್ಳುವಳು – 'ಶ್ರೀ' ರೂಪ ಹಾಗೂ 'ಲಕ್ಷ್ಮಿ'ರೂಪ. ಇವು ಎರಡಾಗಿಯೂ ಒಂದಾಗಿವೆ, ಒಂದಾಗಿಯೂ ಎರಡಾಗಿವೆ. ಎರಡು ರೂಪಗಳಲ್ಲಿಯೂ ಈಕೆಯು ವಿಷ್ಣು ಭಗವಾನನ ಪತ್ನಿಯಾಗಿದ್ದಾಳೆ. 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎನ್ನುವ ಶ್ರುತಿಯ ಮಾತು ಇದಕ್ಕೆ ಆಧಾರ. ಶ್ರೀ ದೇವಿಯನ್ನು 'ಭೂದೇವಿ' ಎಂಬುದಾಗಿಯೂ ಕರೆಯಲಾಗುತ್ತದೆ. ಈ ರೀತಿಯಲ್ಲಿ ಲಕ್ಷ್ಮಿಯ ಎರಡು ರೂಪಗಳಿವೆ– ಒಂದು-ಸಚ್ಚಿದಾನಂದಮಯಿಯಾದ 'ಲಕ್ಷ್ಮಿ'. ಇವು ಶ್ರೀಮನ್ನಾರಾಯಣನೊಂದಿಗೆ ಅಭಿನ್ನವಾಗಿದ್ದು, ಸದಾ ಆತನ ವಕ್ಷಸ್ಥಲದಲ್ಲಿ ನೆಲೆಸಿದ್ದು, ಆತನೊಂದಿಗೆ ಬೇರೆಯಾಗುವುದೇ ಇಲ್ಲ. ಎರಡನೆಯದು–ಭೌತಿಕ ಅಥವಾ ಪ್ರಾಕೃತಿಕ ಸಂಪತ್ತಿನ ಅಧಿಷ್ಠಾತ್ರಿಯಾದ 'ಶ್ರೀದೇವಿ'. ಈಕೆಯನ್ನು 'ಭೂದೇವಿ'ಎಂಬುದಾಗಿಯೂ ಕರೆಯಲಾಗುತ್ತದೆ.

ಲಕ್ಷ್ಮಿಯು ಒಂದೆಡೆ ಇರಲಾರಳು. ಆಕೆಯು ಸ್ಥಿರನಿವಾಸವಿಲ್ಲ. ಆದುದರಿಂದ ಆಕೆಯನ್ನು ನೀಚಸೇವ್ಯಾ, ಚಂಚಲೆ, ಚಪಲೆ, ಬಹುಗಾಮಿನಿ-ಇತ್ಯಾದಿ ಮಾತುಗಳಿಂದ ದೂಷಿಸುತ್ತಾರೆ. ಆದರೆ ಇದು ಲಕ್ಷ್ಮಿಸ್ವರೂಪದ ಜಡಸಂಪತ್ತನ್ನು ಕುರಿತದ್ದಾಗಿರುತ್ತದೆಯೆ ವಿನಹ ಮೂಲ ಸ್ವರೂಪವನ್ನಲ್ಲ; ಚಿನ್ಮಯೀ ದೇವಿಯಾದ ಲಕ್ಷ್ಮಿಯನ್ನಲ್ಲ. ಆಕೆಯು ಪತಿಪ್ರಾಣಳು, ಸನಾತನ ಪರಮಾತ್ಮನ ಸನಾತನ ಅನಪಾಯಿ ಶಕ್ತಿಯಾಗಿರುವಳು. ಆಕೆಯ ಜೀವನವು ಪರಮಾತ್ಮನ ಸೇವೆಯಲ್ಲಿಯೆ ಸದಾ ನಿರತವಾಗಿರುತ್ತದೆ. ಆಕೆಗೆ ಕಮಲವೆಂದರೆ ತುಂಬಾ ಇಷ್ಟ. ಕಮಲವನದಲ್ಲಿ ಸದಾ ನಿವಸಿಸುವಳು. ಕಮಲದ ಮೇಲೆ ಕುಳಿತು, ಕೈನಲ್ಲಿ ಕಮಲ ಪುಷ್ಪವನ್ನು ಸದಾ ಧರಿಸಿರುವಳು. ಸರ್ವ ಸಂಪತ್ತಿನ ಅಧಿಷ್ಠಾತ್ರಿಯಾದ ಆಕೆಯ ಬಳಿ ಕಾಮ, ಕ್ರೋಧ, ಲೋಭ, ಮೋಹ, ಅಹಂಕಾರಗಳು ಸುಳಿಯುವುದೇ ಇಲ್ಲ. ಈಕೆಯು ಸ್ವರ್ಗದಲ್ಲಿ ಸ್ವರ್ಗಲಕ್ಷ್ಮಿ, ರಾಜರ ಮನೆಯಲ್ಲಿ ರಾಜ್ಯಲಕ್ಷ್ಮಿ, ಮನುಷ್ಯರ ನಡುವೆ ಗೃಹಲಕ್ಷ್ಮಿ, ವ್ಯಾಪಾರದಲ್ಲಿ ವಾಣಿಜ್ಯಲಕ್ಷ್ಮಿ, ಯುದ್ಧದಲ್ಲಿ ಗೆದ್ದವರ ಪಾಲಿಗೆ ವಿಜಯಲಕ್ಷ್ಮಿಯ ರೂಪದಲ್ಲಿ ನೆಲೆಸಿರುವಳು.

ಪತಿಪ್ರಾಣವಾದ ಚಿನ್ಮಯೀ ಲಕ್ಷ್ಮಿಯು ಪಾತಿವ್ರತ್ಯದ ಶಿರೋಭೂಷಣವಾಗಿದ್ದಾಳೆ. ಒಮ್ಮೆ ಈಕೆಯು ಭೃಗು ಮಹರ್ಷಿಯ ಮಗಳಾಗಿ ಹುಟ್ಟಿದ್ದುದರಿಂದ ಈಕೆಯನ್ನು 'ಭಾರ್ಗವೀ' ಎಂದು ಕರೆಯಲಾಗುತ್ತದೆ. ಸಮುದ್ರ ಮಂಥನವಾಗುವಾಗ ಕ್ಷೀರಸಾಗರದಿಂದ ಆವಿರ್ಭವಿಸಿದುದರಿಂದ ಈಕೆಯನ್ನು 'ಕ್ಷೀರೋದತನಯೆ' ಅಥವಾ 'ಕ್ಷೀರಸಾಗರ ಕನ್ಯೆ' ಎಂಬುದಾಗಿ ಕರೆಯಲಾಯಿತು. ಈಕೆಯು ಪದ್ಮಿನೀ ವಿದ್ಯೆಯ ಅಧಿಷ್ಠಾತ್ರಿದೇವಿಯಾಗಿದ್ದಾಳೆ. ತಂತ್ರೋಕ್ತ ನೀಲ ಸರಸ್ವತಿಯ ಪೀಠ ಶಕ್ತಿಗಳಲ್ಲಿಯೂ ಈಕೆಯ ಹೆಸರು ಕಂಡುಬರುತ್ತದೆ. ಪರಮಾತ್ಮನು ಭೂಮಿಯ ಮೇಲೆ ಅವತಾರ ಮಾಡಿದಾಗಲೆಲ್ಲ, ಆತನೊಂದಿಗೆ ಲಕ್ಷ್ಮೀದೇವಿಯೂ ಅವತಾರ ಮಾಡಿ, ಆತನ ಸೇವೆ ಮಾಡುತ್ತಾ ಆತನ ಲೀಲಾ ವಿನೋದಗಳಲ್ಲಿ ಸಹಕರಿಸುತ್ತಿದ್ದಳು.

ವಿಷ್ಣುವು ಲೋಕವನ್ನು ಮೋಹಗೊಳಿಸುವುದಕ್ಕಾಗಿ ಜಗತ್ತನ್ನು ಎರಡು ಭಾಗವಾಗಿ ವಿಂಗಡಿಸಿದ. ಬ್ರಾಹ್ಮಣರೂ, ವೇದಗಳೂ, ಲಕ್ಷ್ಮಿಯೂ ಒಂದು ಭಾಗ. ವೇದಬಾಹ್ಯರು, ಅಲಕ್ಷ್ಮಿ ಹಾಗೂ ಅಧರ್ಮಗಳು ಮತ್ತೊಂದು ಭಾಗ. ಮೊದಲು ಅಲಕ್ಷ್ಮಿಯನ್ನು ವಿಷ್ಣುವು ಸೃಷ್ಟಿ ಮಾಡಿದ. ಇದರಿಂದ ಆಕೆಗೆ ಜ್ಯೇಷ್ಠಾ ಎಂಬ ಹೆಸರು ಬಂದಿತು. ದೇವ ದಾನವರು ಅಮೃತಕ್ಕಾಗಿ ಕ್ಷೀರ ಸಮುದ್ರವನ್ನು ಮಥನ ಮಾಡಿದಾಗ ತೀವ್ರವಾದ ವಿಷವು ಜನಿಸಿದ ನಂತರ ಜ್ಯೇಷ್ಠಾದೇವಿ ಜನಿಸಿದಳು. ಮೊದಲು ಬಂದ ಈಕೆಯು ಅಮಂಗಳಕಾರಿಣಿಯಾದುದರಿಂದ ಅಲಕ್ಷ್ಮಿ ಎಂಬ ಹೆಸರು ಈಕೆಗೆ ರೂಢಿಯಾಯಿತು. ದುಸ್ಸಹನೆಂಬ ಬ್ರಹ್ಮರ್ಷಿಯು ಜ್ಯೇಷ್ಠಾದೇವಿಯನ್ನು ಮದುವೆಯಾಗಿ ಅವಳೊಂದಿಗೆ ಲೋಕಗಳಲ್ಲಿ ಅಲೆಯತೊಡಗಿದ. ನಂತರ ಪಾಲ್ಗಡಲಿನಿಂದ ಉದ್ಭವಿಸಿದ ಲಕ್ಷ್ಮಿಯನ್ನು ಮಹಾವಿಷ್ಣುವು ಮದುವೆಯಾದ.

'ರಘುಸುತ'

ಈಕೆಯ ಆವಿರ್ಭಾವದ ಬಗೆಗಿನ ಕಥೆಯು ಈ ರೀತಿ ಇದೆ–

ಬ್ರಹ್ಮನ ಹೃದಯದಿಂದ ಸ್ವಾಯಂಭುವ ಮನ್ವಂತರದಲ್ಲಿ ಜನಿಸಿದ ಭೃಗು ಎನ್ನುವ ಬ್ರಹ್ಮರ್ಷಿಯ ಪತ್ನಿಯೆ ಖ್ಯಾತಿ ಎಂಬಾಕೆ. ಈಕೆಯು ಕರ್ದಮ ಬ್ರಹ್ಮನ ಒಂಬತ್ತು ಮಂದಿ ಪುತ್ರಿಯರಲ್ಲಿ ಒಬ್ಬಳು. ಈ ಖ್ಯಾತಿಯ ಗರ್ಭದಿಂದ ತ್ರಿಲೋಕ ಸುಂದರಿಯೂ, ಭುವನ ಮೋಹಿನಿಯೂ ಆದ ಪುತ್ರಿಯೋರ್ವಳು ಜನಿಸಿದಳು. ಸಕಲ ಲಕ್ಷಣಗಳಿಂದ ಸುಶೋಭಿತಳಾದ ಈಕೆಯನ್ನು 'ಲಕ್ಷ್ಮಿ' ಎಂದು ಕರೆದರು. (ಭೃಗುವಿನ ಮಗಳು ಭಾರ್ಗವೀ ಎನ್ನುವುದೂ ಮತ್ತೊಂದು ಹೆಸರು.) ಈಕೆಯು ಭಗವಾನ್ ನಾರಾಯಣನ ಸದ್ಗುಣಗಳ ಪ್ರಭಾವಕ್ಕೆ ಒಳಗಾಗಿ ಆತನಲ್ಲಿ ಅನುರಕ್ತಳಾದಳು. ಆತನನ್ನು ತನ್ನ ಪತಿಯನ್ನಾಗಿ ಪಡೆಯಲು ಸಮುದ್ರ ತಟದಲ್ಲಿ ಘೋರ ತಪಸ್ಸನ್ನು ಆಚರಿಸತೊಡಗಿದಳು. ಸಾವಿರಾರು ವರ್ಷಗಳು ಉರುಳಿದುವು. ಆಗ ಇಂದ್ರನು ವಿಷ್ಣುವಿನ ರೂಪವನ್ನು ಧರಿಸಿ ಲಕ್ಷ್ಮಿಗೆ ಪ್ರತ್ಯಕ್ಷನಾಗಿ, ವರವನ್ನು ಬೇಡು ಎಂದನು. 'ನೀವು ನಿಮ್ಮ ವಿಶ್ವರೂಪದ ದರ್ಶನ ಭಾಗ್ಯವನ್ನು ನನಗೆ ನೀಡಿ' ಎಂದಳು. ಅಂತಹ ಶಕ್ತಿ ಇಲ್ಲದ ಇಂದ್ರನು ಲಜ್ಜಿತನಾಗಿ ಅಲ್ಲಿಂದ ಹೊರಟು ಹೋದನು. ಅನೇಕ ದೇವತೆಗಳು ಬಂದು ವಿಶ್ವರೂಪವನ್ನು ತೋರಿಸಲಾರದೆ ಹೊರಟು ಹೋದರು

ನಂತರ ಸಾಕ್ಷಾತ್ ವಿಷ್ಣುವೇ ದಯಮಾಡಿ, ಆಕೆಯ ಅಪೇಕ್ಷೆಯಂತೆ ವಿಶ್ವರೂಪ ದರ್ಶನ ಮಾಡಿಸಿ, ಆಕೆಯನ್ನು ತನ್ನ ಪತ್ನಿಯಾಗಿ ಸ್ವೀಕರಿಸಿದನು. ನಂತರ ಹೀಗೆಂದು ತಿಳಿಸಿದನು.–'ದೇವಿ, ಬ್ರಹ್ಮಚರ್ಯವೆ ಎಲ್ಲ ಧರ್ಮಗಳ ಮೂಲ ಹಾಗೂ ಸರ್ವೋತ್ತಮ ತಪಸ್ಸಾಗಿರುವುದು. ನೀನು ಬ್ರಹ್ಮಚರ್ಯವನ್ನು ಮೂಲತಃ ಪಾಲಿಸಿ, ಕಠೋರ ತಪಸ್ಸನ್ನು, ಆಚರಿಸಿರುವೆ. ಆದುದರಿಂದ ನಾನು ಇಲ್ಲಿ ಮೂಲ 'ಶ್ರೀಪತಿ' ಎನ್ನುವ ಹೆಸರಿನಲ್ಲಿ ವಿಖ್ಯಾತನಾಗುವೆ. ಅಂತೆಯೇ ನೀನೂ ಕೂಡ ಬ್ರಹ್ಮಚರ್ಯ ಸ್ವರೂಪಿಣಿ 'ಮೂಲಶ್ರೀ' ಎನ್ನುವ ಹೆಸರಿನಿಂದ ಖ್ಯಾತಳಾಗು,

ಲಕ್ಷ್ಮಿಯು ಪ್ರಕಟಗೊಳ್ಳುವ ಎರಡನೆ ಕತೆಯು ಈ ರೀತಿ ಇದೆ–

ಒಮ್ಮೆ ದೂರ್ವಾಸ ಮುನಿಯು ಸುತ್ತಾಡುತ್ತಾ ಒಂದು ಸುಂದರ ಉದ್ಯಾನವನವನ್ನು ತಲುಪಿದನು. ಅಲ್ಲಿ ಓರ್ವ ವಿದ್ಯಾಧರ ಸುಂದರಿಯು ಪಾರಿಜಾತ ಪುಷ್ಪಗಳ ಮಾಲೆಯೊಂದನ್ನು ಹಿಡಿದು ನಿಂತಿದ್ದಳು. ಅವುಗಳ ದಿವ್ಯ ಸುಗಂಧದಿಂದ ಆಕರ್ಷಿತನಾಗಿ ಮುನಿಯು ಆ ಹಾರವನ್ನು ಕೊಡೆಂದು ಕೇಳಿದನು. ಆಕೆಯು ಆ ಮಾಲೆಯನ್ನು ಆತನಿಗೆ ಅರ್ಪಿಸಿದಳು. ಆತನು ಅದನ್ನು ತೆಗೆದುಕೊಂಡು ಬರುವಾಗ ಐರಾವತವನ್ನೇರಿ ಬರುತ್ತಿದ್ದ ಇಂದ್ರನು ಕಾಣಿಸಿದನು. ಆಗ ದೂರ್ವಾಸನು ಆ ಹಾರವನ್ನು ನೀಡಿದಾಗ ಐರಾವತವು ಅದನ್ನು ಸ್ವೀಕರಿಸಿ, ಭೂಮಿಯ ಮೇಲೆ ಎಸೆಯಿತು. ಇದರಿಂದ ಕೋಪಗೊಂಡ ಋಷಿಯು ಲಕ್ಷ್ಮಿಸ್ವರೂಪವಾದ ಆ ಹಾರವನ್ನು ದುರ್ಲಕ್ಷಿಸಿದ್ದರಿಂದ, ಇಂದ್ರನ ಮೂರೂ ಲೋಕಗಳಲ್ಲಿಯೂ ನೆಲೆಸಿರುವ ಲಕ್ಷ್ಮಿಯು ಅದೃಶ್ಯವಾಗಲೆಂದು ಶಾಪ ನೀಡಿದನು. ಇದರಿಂದ ಆ ಲೋಕಗಳಲ್ಲಿ ಲಕ್ಷ್ಮಿಯು ನಷ್ಟವಾದಳು. ಇಂದ್ರಾದಿ ದೇವತೆಗಳು ಕಂಗಾಲಾದರು. ದಾನವರು ಲಕ್ಷ್ಮೀನಷ್ಟರಾದ ದೇವತೆಗಳನ್ನು ಸೋಲಿಸಿದರು. ಇದರಿಂದ ಮತ್ತಷ್ಟು ದುಃಖಿತರಾದ ದೇವತೆಗಳು ಮಹಾವಿಷ್ಣುವನ್ನು ಕಂಡು ತಮ್ಮ ದುಃಖವನ್ನು ತೋಡಿಕೊಂಡರು. ಆಗ ವಿಷ್ಣುವು ತಿಳಿಸಿದ ಉಪಾಯದಂತೆ ದೇವದಾನವರು ಕ್ಷೀರ ಸಮುದ್ರವನ್ನು ಮಥನ ಮಾಡಿದರು. ಇದರಿಂದ ಹುಟ್ಟಿದ ಅಮೃತವನ್ನು ವಿಷ್ಣುವು ಮೋಹಿನಿ ರೂಪದಲ್ಲಿ ದೇವತೆಗಳಿಗೆ

## ಶ್ರೀ ಪದ್ಮಾವತೀ ದೇವಾಲಯ



### ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

ಕೊಟ್ಟು ಅವರಿಗೆ ಅಮರತ್ವವನ್ನು ನೀಡಿದನು. ಆಗ ದೇವತೆಗಳು ಲಕ್ಷ್ಮಿಯನ್ನು ಪೂಜಿಸಿ, ತಮ್ಮ ಮನೋವಾಂಛೆಯನ್ನು ಪೂರ್ಣಗೊಳಿಸಿಕೊಂಡರು.

ಪ್ರತಿ ಅವತಾರದಲ್ಲಿಯೂ ಲಕ್ಷ್ಮಿಯು ವಿಷ್ಣುವಿನ ಜೊತೆಯಲ್ಲಿಯೇ ಇದ್ದಳು. ಶ್ರೀ ವಿಷ್ಣುವು ಆದಿತ್ಯನಾದಾಗ ಲಕ್ಷ್ಮಿಯು ತಾವರೆಯಿಂದ ಜನಿಸಿ 'ಪದ್ಮಾ' ಎಂಬ ಹೆಸರಿನಿಂದ ಪ್ರಖ್ಯಾತಳಾದಳು. ವಿಷ್ಣುವು ಪರಶುರಾಮನಾದಾಗ ಈಕೆಯು ಭೂ–ದೇವಿಯಾಗಿದ್ದಳು. ಈಕೆಯೇ ರಾಮನೊಂದಿಗೆ 'ಸೀತೆ'ಯಾಗಿ, ಶ್ರೀಕೃಷ್ಣನೊಂದಿಗೆ 'ರುಕ್ಮಿಣಿ'ಯಾಗಿ, ವಿಷ್ಣುವು ದೇವರೂಪದಿಂದಿದ್ದಾಗ ಈಕೆಯು ದೇವತೆಯಾಗಿ, ಮನುಷ್ಯನಾದಾಗ ಈಕೆಯು ಮಾನುಷಿಯಾಗಿದ್ದಳು.

ಅಕ್ಷಸ್ರಕ್‌ಪರಶುಂ ಗದೇಷು ಕುಲಿಶಂ
ಪದ್ಮಂ ಧನುಷ್ಕುಂಡಿಕಾಂ
ದಂಡಂ ಶಕ್ತಿಮಸಿಂಚ ಚರ್ಮ
ಜಲಜಂ ಘಂಟಾಂ ಸುರಾಭಾಜನಮ್ ।
ಶೂಲಂ ಪಾಶಸುದರ್ಶನೇ ಚ
ದಧತೀಂ ಹಸ್ತೈಃ ಪ್ರಸನ್ನಾನನಾಂ
ಸೇವೇ ಸೈರಿಭಮರ್ದಿನೀಮಿಹ
ಮಹಾಲಕ್ಷ್ಮೀಂ ಸರೋಜಸ್ಥಿತಾಮ್ ॥

ಈ ರೀತಿಯಲ್ಲಿ ಯುದ್ಧಸಮಯದಲ್ಲಿ ಮಹಾಲಕ್ಷ್ಮಿಯು ಸಿಂಹವಾಹಿನಿಯಾಗುವಳು. ಅಪರ ಮಂತ್ರಗಳಲ್ಲಿ ಈಕೆಯ ವಾಹನವು ಗೂಬೆ ಎಂದು ತಿಳಿಸಲಾಗಿದೆ. ಯಾರ ಮೇಲೆ ಲಕ್ಷ್ಮಿಯ ಕೃಪೆ ಉಂಟಾಗುವುದೊ, ಅವರು ಬೆಳಕನ್ನು ನೋಡುವಂತೆಯೇ ಇಲ್ಲ ಎಂಬುದು ಇದರ ಗೂಢಾರ್ಥ. ಅಂತಹವನ ಹಣವು ಒಳ್ಳೆಯ ಕೆಲಸಗಳಿಗೆ ಉಪಯೋಗವಾಗುವುದಿಲ್ಲ. ಆದುದರಿಂದ ಲಕ್ಷ್ಮಿಯು ರಜೋಗುಣದವಳಾಗಿರುತ್ತಾಳೆ. ಇದರಿಂದ ದುಃಖವೇ ಹೊರತು ಮಾನವನಿಗೆ ನಿಜ ಅರ್ಥದ ಆನಂದವಿರುವುದಿಲ್ಲ. ಅಂತಹ ಧನಾಧಿಪತಿಯು ಹುಚ್ಚನಂತಿರುತ್ತಾನೆ. ಇಂತಹವನ ಮೇಲೆ ಮಹಾಸರಸ್ವತಿಯ ಕೃಪೆಯು ಆಗಲೇಬೇಕು. ಆಗಲೇ ಅವನು ಮಹಾಪುರುಷನಾಗುತ್ತಾನೆ.

ಶ್ರೀಕೃಷ್ಣನ ಪಟ್ಟಮಹಿಷಿಯಾದ, ಮಹಾರಾಣಿ ರುಕ್ಮಿಣಿಯು ಒಮ್ಮೆ ತನ್ನ ಅಭಿನ್ನರೂಪವಾದ ಲಕ್ಷ್ಮಿಯನ್ನು ಸಂಧಿಸಲು ವೈಕುಂಠಕ್ಕೆ ಹೋದಳು. ಅಲ್ಲಿ ಲಕ್ಷ್ಮಿಯು ಶ್ರೀಮನ್ನಾರಾಯಣನ ಬಳಿ ಕುಳಿತಿರುವುದನ್ನು ನೋಡಿ ಸಂತೋಷಗೊಂಡು, ಈ ರೀತಿ ಕೇಳಿದಳು– "ದೇವಿ! ನೀನು ಯಾವ ಸ್ಥಳದಲ್ಲಿ, ಹೇಗೆ ಮಾನವರ ಸಮೀಪದಲ್ಲಿ ಇರಬಲ್ಲೆಯೆಂಬುದನ್ನು ತಿಳಿಸುವಿಯೇನು?"

ಆ ಲಕ್ಷ್ಮಿಯು ಉತ್ತರಿಸಿದಳು,

"ಹೇಳುವೆನು ಕೇಳು! ಮಿತಭಾಷಿ, ಕಾರ್ಯಕುಶಲತೆಯುಳ್ಳವನು, ಭಕ್ತ, ಕೃತಜ್ಞ, ಜಿತೇಂದ್ರಿಯ ಹಾಗೂ ಉದಾರಿಗಳ ಬಳಿ ನಾನು ಸದಾ ಇರುವೆನು. ಸದಾಚಾರಿ, ಧರ್ಮಜ್ಞನು, ಹಿರಿಯರ ಸೇವೆಯಲ್ಲಿ ತತ್ಪರನು, ಪುಣ್ಯಾತ್ಮ, ಕ್ಷಮಾಶೀಲ ಮತ್ತು ಬುದ್ಧಿವಂತರ ಬಳಿ ನಾನು ಸದಾ ಇರುತ್ತೇನೆ. ಪತಿ ಸೇವೆ ಮಾಡುವ ಸ್ತ್ರೀಯರು, ಕ್ಷಮೆ, ಇಂದ್ರಿಯ ಸಂಯಮ, ಸರಳತೆ, ಸತ್ಯ ನುಡಿಯುವಿಕೆ ಇತ್ಯಾದಿ ಸದ್ಗುಣಗಳನ್ನು ಹೊಂದಿರುವವರು, ದೇವತೆಗಳ, ಬ್ರಾಹ್ಮಣರ, ದೀನದಲಿತರ ಬಗ್ಗೆ ಶ್ರದ್ಧೆಯನ್ನು ಹೊಂದಿರುವವರು– ಇಂತಹವರ ಸಮೀಪದಲ್ಲಿ ನಾನಿರುವೆ. ಯೋಧ, ಯುವತಿ, ಆಭೂಷಣಗಳು, ಯಜ್ಞ, ಜಲಾವೃತಮೇಘ, ಅರಳಿದ ಕಮಲ, ಶರದೃತುವಿನ ನಕ್ಷತ್ರ, ಆನೆ, ಹಸುಗಳಿರುವ ಸ್ಥಳ, ಅರಳಿದ ಕಮಲಗಳಿಂದ ಕೂಡಿದ ಕೊಳಗಳು, ರಾಜ, ಸಿಂಹಾಸನ, ಸಜ್ಜನನು, ಕರ್ತವ್ಯ ನಿರತರಾದವರು – ಇವರುಗಳು ನನ್ನ ಬಹು ಮುಖ್ಯವಾದ ನಿವಾಸಸ್ಥಾನಗಳು.

"ಪ್ರತಿದಿನ ಹೋಮವಾಗುವ ಮನೆ, ದೇವತೆ, ಗೋವುಗಳು ಹಾಗೂ ಬ್ರಾಹ್ಮಣರಿಗೆ ಗೌರವ ಸಿಗುವ ಕಡೆಗಳಲ್ಲಿ ನಿಷ್ಠೆಯಿಂದ ದುಡಿಯುವ ಜನಸಾಮಾನ್ಯರ ಮನೆಗಳನ್ನು ನಾನು ಬಿಡುವುದಿಲ್ಲ.

"ಪರಮಾತ್ಮನಾದ ಶ್ರೀಮನ್ನಾರಾಯಣನ ಪೂಜೆ, ಬ್ರಾಹ್ಮಣತ್ವಗಳನ್ನು ಕಾಪಾಡಿಕೊಂಡು ಬರುವಿಕೆಗಳು ಈ ಜಗತ್ತಿನ ಮುಖ್ಯ ಆಧಾರಗಳಾಗಿವೆ. ಇಂತಹವುಗಳನ್ನು ಹೊಂದಿರುವವರ ದೇಹದಲ್ಲಿ ಅಭಿನ್ನ ರೂಪದಲ್ಲಿ ನಾನು ನೆಲೆಸಿರುತ್ತೇನೆ. ನಾನು ಇರುವೆಡೆಗಳಲ್ಲಿ ಧರ್ಮ, ಅರ್ಥ ಹಾಗೂ ಸುಖಗಳ ವೃದ್ಧಿ ಮಾಗುತ್ತಿರುತ್ತದೆ.

"ನಾನು ಯಾವ ಸ್ಥಳ, ಸನ್ನಿವೇಶಗಳನ್ನು ಇಷ್ಟಪಡುವುದಿಲ್ಲ ಎನ್ನುವುದನ್ನು ಹೇಳುತ್ತೇನೆ, ಕೇಳು–

"ಅಕರ್ಮಣ್ಯನು, ನಾಸ್ತಿಕನು, ಕೃತಘ್ನನು, ಆಚಾರಭ್ರಷ್ಟನು, ನೃಶಂಸನು, ಕಳ್ಳನು, ಗುರುದ್ರೋಹಿ, ಉದ್ಧತನು ಹಾಗೂ ಕಪಟಿ; ಬಲ, ಬುದ್ಧಿ ಹಾಗೂ ವೀರ್ಯಹೀನನು – ಇಂತಹವರುಗಳ ಬಳಿ ನಾನಿರುವುದಿಲ್ಲ. ಸುಖದುಃಖಗಳ ಅಗತ್ಯವನ್ನು ತಿಳಿಯದವನು, ದುರಾಶಾಪೀಡಿತನು, ಅಲ್ಪತೃಪ್ತನು– ಇವರುಗಳ ಬಳಿಯೂ ನಾನು ಇರುವುದಿಲ್ಲ. ಗಲೀಜು, ಅಶುಭ್ರರಾಗಿರುವ ಸ್ತ್ರೀಯರು, ಮನೆಯ ವಸ್ತುಗಳನ್ನು ಹೇಗೆಂದರೆ ಹಾಗೆ ಎಲ್ಲೆಂದರಲ್ಲಿ ಚೆಲ್ಲಿರುವವರು, ಉತ್ತಮ ಮನೋವಿಚಾರಗಳನ್ನು ಹೊಂದಿಲ್ಲದವಳು, ಸದಾ ಗಂಡನಿಗೆ ಎದುರು ಮಾತನಾಡುವವಳು, ಬೇರೆಯವರ ಮನೆಗಳ ಬಳಿ ಇರಲು ಇಷ್ಟಪಡುವವಳು, ಧೈರ್ಯ ಲಜ್ಜೆ ಇಲ್ಲದವಳು, ನಿರ್ದಯಳೂ, ತನ್ನ ಶರೀರದ ಪವಿತ್ರತೆಯನ್ನು ಕಾಪಾಡಿಕೊಳ್ಳಲಾರದವಳೂ, ಮನೆಯ ಕೆಲಸ ಕಾರ್ಯಗಳಲ್ಲಿ ಇಷ್ಟವಿಲ್ಲದವಳೂ, ಸದಾ ಜಗಳ ಮಾಡುವವಳು ಮತ್ತು ಹೆಚ್ಚು ನಿದ್ದೆ ಮಾಡುವವಳು– ಇಂತಹ ಹೆಂಗಸರ ಬಳಿಯಂತೂ ನಾನು ಇರುವುದೇ ಇಲ್ಲ..."

(ಆಧಾರಗಳಿಂದ)

---

## ಪ್ರತ್ಯೇಕ ಕಲ್ಯಾಣೋತ್ಸವ

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

ಅರ್ಜಿತ ಕಲ್ಯಾಣೋತ್ಸವ ಮಾಡಿಸುವ ಆಸಕ್ತ ಭಕ್ತರಿಗೆ ಮತ್ತೊಂದು ಸುವಾರ್ತೆ ಎಂದರೆ; ಕಲ್ಯಾಣೋತ್ಸವವನ್ನು ರೂ. 500–00 ಶುಲ್ಕದಲ್ಲಿ ನಡೆಸುವ ಕ್ರಮವನ್ನು ಜಾರಿಗೆ ತರಲಾಗಿರುವುದು. ಇದರಲ್ಲಿ ಗೃಹಸ್ಥರನ್ನೂ ಸೇರಿಸಿ ಐದು ಜನರಿಗೆ ಮಾತ್ರ ಪ್ರವೇಶ. ಮಿಕ್ಕಂತೆ ಎಲ್ಲವೂ ರೂ. 2000–00 ಕಲ್ಯಾಣೋತ್ಸವದಂತೆಯೇ.

ಆಸ್ತಿಕ ಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಳ್ಳಬೇಕೆಂದು ವಿನಂತಿ.

**ತಿ. ತಿ. ದೇ.**

# ಪೂವಲ್ಲಿ ಕ್ಷೇತ್ರ

ಕನ್ನಡನಾಡಿನ ಅನೇಕ ಮಹತ್ವದ ಕ್ಷೇತ್ರಗಳಲ್ಲಿ ಒಂದಾದುದು 'ಪೂವಲ್ಲಿ' ಕ್ಷೇತ್ರ. ಅನೇಕ ಕ್ಷೇತ್ರಗಳ ಸಮೂಹದಲ್ಲಿ ಕೀರ್ತಿವೆತ್ತ ಪೂವಲ್ಲಿ (ಹೂಲಿ)ಯ ಬಗ್ಗೆ ಬಹು ಜನಗಳಿಗೆ ಪರಿಚಯವಿಲ್ಲದಿರಬಹುದು. ಈ ಕ್ಷೇತ್ರವನ್ನು ಅನೇಕ ಗ್ರಂಥಗಳಲ್ಲಿ ಪೂಲಿಗ್ರಾಮ, ಪೂಲಿಪುರ, ಪೂಲಿ ಅಗ್ರಹಾರ, ಚೂಡಾಮಣಿ ಪೂಲಿ ಇತ್ಯಾದಿಯಾಗಿ ಬಣ್ಣಿಸಿದ್ದಾರೆ. ಕನ್ನಡದ ಸುಪ್ರಸಿದ್ಧ ಕವಿ ಸಿದ್ಧನಂಜೇಶನು ತನ್ನ ಕಾವ್ಯದಲ್ಲಿ (ಗುರುರಾಜ ಚರಿತ್ರೆಯು) ಈ ರೀತಿಯಾಗಿ ಕೊಂಡಾಡಿದ್ದಾನೆ.

ಕಾಶಿಗಿಂದಂ ಮಿಗಿಲು ಕೇದಾರಕಿಂದಧಿಕ
ಶ್ರೀಶೈಲಕಿಂ ಮೇಲು ಹಂಪೆಗಿಂದಂ
ಹೆಚ್ಚು
ವಾಸಿ ಗೋಕರ್ಣ ದ್ರಾಕ್ಷಾರಾಮಕಿಂ
ಚಿದಂಬರಕಿಂತ ಘನವಾದುದು ||
ಆಸೇತು ಬಂಧಕಿಂದುನ್ನತಂ ಭೂಭಾಗ
ದಾಸಕಲ ಸಿದ್ಧಗಳ ಕೊಡುವ
ತೀರ್ಥಂಗಳಿಗೆ
ಸಾಸಿರಕ್ಕಗಣಿತಂ ಸದ್ಗುರು ಕ್ಷೇತ್ರ
ಕಣೆಯಾದ ಕ್ಷೇತ್ರವೊಳಿವೇ ||

ಇಂದು ಈ ಊರು ಬಳ್ಳಿಗಾವಿ, ಮಳಖೇಡ, ಬಾದಾಮಿಗಳಂತೆ ಸಾಮಾನ್ಯವಾದ ಊರಾಗಿದ್ದರೂ ಗತ ವೈಭವದ ಕುರುಹುಗಳನ್ನು ಕಾಣಬಹುದು. ಧಾರವಾಡದಿಂದ ಸವದತ್ತಿಗೆ ಹೋಗಿ ಅಲ್ಲಿಂದ ಈಶಾನ್ಯಕ್ಕೆ ರಾಮದುರ್ಗದ ಮಾರ್ಗ ಹಿಡಿದು ಕೇವಲ 5 ಮೈಲಿ ಹೋದರೆ ಹೆದ್ದಾರಿಯ ಎಡಭಾಗಕ್ಕೆ ಈ ಊರು ನಮಗೆ ಸಿಗುತ್ತದೆ.

ಈ ಕ್ಷೇತ್ರವು ಭಾವುಕ ಜೀವಿಗಳಿಗೆ ಪುಣ್ಯಕ್ಷೇತ್ರವಾಗಿ, ಮುಮುಕ್ಷುಗಳಿಗೆ ಸಿದ್ಧಕ್ಷೇತ್ರವಾಗಿ, ಧರ್ಮ ಬೀರುಗಳಿಗೆ ತೀರ್ಥಕ್ಷೇತ್ರವಾಗಿ ಮೆರೆಯುತ್ತಿದೆ. ಇಲ್ಲಿ ಇರುವ ಪಂಚಲಿಂಗಗಳುಳ್ಳ 'ಪಂಚಲಿಂಗೇಶ್ವರ' ದೇವಾಲಯವು ವೀರಶೈವರ ಪ್ರಸಿದ್ಧ ಪಂಚಾಚಾರ್ಯರ ಹೆಸರಿನಲ್ಲಿ ಸ್ಥಾಪಿಸಲ್ಪಟ್ಟ ಲಿಂಗಗಳಿಂದ ಕೂಡಿದ ದೇವಾಲಯವೆಂದು ಹೇಳಲಾಗುತ್ತದೆ. ಈ ಕ್ಷೇತ್ರವು ಪುಲಿಕೇಶಿಯ ಕಾಲದಲ್ಲಿಯೇ ಪ್ರಸಿದ್ಧ ಪುಣ್ಯಕ್ಷೇತ್ರವೆಂದು ಪ್ರಸಿದ್ಧಿ ಪಡೆದಿತ್ತು. ಈ ಕ್ಷೇತ್ರದ ಚರಿತ್ರೆ ಎರಡು ಸಾವಿರ ವರ್ಷಗಳಿಗೂ ಹಿಂದಕ್ಕೆ ಹೋಗುತ್ತದೆಂದು ವಿದ್ವಾಂಸರು, ಪರಿಶೋಧಕರು, ತರ್ಕಿಸಿದ್ದಾರೆ.

ಪರಮೇಶ್ವರನ ಪಂಚವಿಂಶತಿ, ಅಂದರೆ 25 ಲೀಲೆಗಳಲ್ಲಿ 'ದಕ್ಷಿಣಾಮೂರ್ತಿ' ಲೀಲೆಯೂ ಒಂದು. ಶಿವನು ಒಮ್ಮೆ ಹಿಮಾಲಯದಲ್ಲಿ ಇರುವ ಕೈಲಾಸ ಪರ್ವತದ ಮಾರ್ಗದಲ್ಲಿದ್ದ ಸಪ್ತಋಷಿಗಳ ಸತ್ತ್ವವನ್ನು ಪರೀಕ್ಷಿಸಲು ಅವರಿಗೆಲ್ಲಾ ಧರ್ಮಮಾರ್ಗ ಬೋಧಿಸಿ, ದಕ್ಷಿಣದ ಸಹ್ಯಾದ್ರಿ ಪರ್ವತ ಪ್ರದೇಶದಲ್ಲಿ ರಾರಾಜಿಸುವ ಸಿದ್ಧಾಚಲಕ್ಕೆ ಸಮೀಪದಲ್ಲಿರುವ ಪೂವಲ್ಲಿಗೆ ಬಂದನಂತೆ. ಅಲ್ಲಿ ತನ್ನ ಪುತ್ರನಾದ ಕುಮಾರಸ್ವಾಮಿಗೆ ಆಧ್ಯಾತ್ಮಿಕ ವಿದ್ಯಾಪೀಠದ ಆಚಾರ್ಯ ಪಟ್ಟವನ್ನು ಕಟ್ಟಿ ಆ ತನ್ನ ದಕ್ಷಿಣಾಮೂರ್ತಿ ಲೀಲೆಯನ್ನು ಮುಗಿಸಿದನಂತೆ. ಆನಂತರ ಕುಮಾರಸ್ವಾಮಿಯು ವಾಮದೇವ ಮಹರ್ಷಿಗಳಿಗೆ ತನ್ನ ಪೀಠವನ್ನು ಕೊಟ್ಟು ಕ್ರೌಂಚ ಪರ್ವತಕ್ಕೆ ಹೋಗಿ ನೆಲೆಗೊಂಡನಂತೆ. ಕ್ರೌಂಚ ಪರ್ವತವೆಂದರೆ ಈಗಿರುವ ಸೊಂಡೂರಿನ ಪಕ್ಕದಲ್ಲಿರುವ ಕುಮಾರಸ್ವಾಮಿ ಬೆಟ್ಟ. ಹೀಗೆ ಅನೇಕ ಪೌರಾಣಿಕ ಕಥೆಗಳ ಸಂಬಂಧವನ್ನು ಈ ಊರಿಗೆ ಹೇಳಲಾಗುತ್ತದೆ. ಈ ಊರಿನಲ್ಲಿ ಅನೇಕ ಶಿಲಾಶಾಸನಗಳು ಇದರ ಗತವೈಭವವನ್ನು, ಧಾರ್ಮಿಕ ಪರಂಪರೆಯನ್ನು, ಐತಿಹಾಸಿಕ ಮಹತ್ವವನ್ನು ವರ್ಣಿಸುತ್ತವೆ. ಕ್ರಿ. ಶ. 1184 ರಲ್ಲಿ ಕೆತ್ತಲ್ಪಟ್ಟ ಒಂದು ಶಾಸನದಲ್ಲಿ ಪೂಲಿಯ ಊರೊಡೆಯನಾದ 'ಮಂಗಳಾರ್ಣವ'ನೆಂಬ ಚಾಲುಕ್ಯರಾಜನು, ಚೋಳ, ಮಾಳವ, ಗುರ್ಜರೊಡನೆ ಯುದ್ಧಮಾಡಿ ಜಯವನ್ನು ಸಂಪಾದಿಸಿದ ಎನ್ನಲಾಗಿದೆ. ಕೀರ್ತಿಯು ತುಂಬಿದ ಮಹಾನಗರವಾಗಿ 12ನೇ ಶತಮಾನದಲ್ಲಿಯೇ ಕಾಣಿಸಿಕೊಂಡಿದೆ ಹೂಲಿ.

ಈ ಊರಿನಲ್ಲಿ ಮತ್ತು ಸುತ್ತಮುತ್ತಲಿನ ಪರಿಸರದಲ್ಲಿ ನೂರಾರು ವಿವಿಧ ದೇವಾಲಯಗಳ ಅವಶೇಷಗಳಿದ್ದರೂ, ವೈದಿಕ ಸಂಪ್ರದಾಯದವರ, ವೀರಶೈವರ, ಜೈನರ, ಕೆಲವೇ ದೇವಾಲಯಗಳು ಉಳಿದುಕೊಂಡಿವೆ. ಅವುಗಳಲ್ಲಿ, ಅಗಸ್ತ್ಯೇಶ್ವರ, ಅಂಧಕೇಶ್ವರ (ಮದನೇಶ್ವರ) ಪಂಚಲಿಂಗೇಶ್ವರ, ಭೀಮೇಶ್ವರ, ಕರಿಸಿದ್ಧೇಶ್ವರ, ಮೊದಲಾದ ದೇವಾಲಯಗಳು ಕಲೆ ಮತ್ತು ಪ್ರಾಚೀನತೆಯ ದೃಷ್ಟಿಯಿಂದ ಹೆಸರಿಸತಕ್ಕವಾಗಿವೆ. ಇವಲ್ಲದೆ ಅನೇಕ ಚಿಕ್ಕಪುಟ್ಟ ಈಶ್ವರ ದೇವಾಲಯಗಳಿದ್ದು ಎಲ್ಲಕ್ಕಿಂತ ಹೆಚ್ಚಾಗಿ ವೀರಶೈವರ ಪ್ರಮುಖ ಕ್ಷೇತ್ರವೆಂದು ಹೇಳಬಹುದು. ಈಗಲೂ ಇಲ್ಲಿರುವ ವೀರಶೈವರ ಮಠವಾದ ಪಂಚವಣಿಗೆ ಬೃಹನ್ಮಠವು ಭವ್ಯವಾದ, ಐತಿಹಾಸಿಕ, ಘಟನೆಗಳಿಂದ ಕೂಡಿದ ದೊಡ್ಡ ಮಠವಾಗಿದೆ. ಇಲ್ಲಿ ಇನ್ನೊಂದು ಶಿವಯೋಗಾಶ್ರಮ ಮಠ ಎಂಬ ಮಠವೂ ಇದೆ.

ಕರ್ನಾಟಕದಲ್ಲಿ ಇಂಥ ಅನೇಕ ದೇವಾಲಯಗಳಿವೆ. ಅಲ್ಲದೆ ಐತಿಹಾಸಿಕ ಸ್ಥಳ, ಪುಣ್ಯಕ್ಷೇತ್ರಗಳು ಅನೇಕ. ತೀರ್ಥಯಾತ್ರೆ ಮಾಡಲು ದೈವಭಕ್ತರು, ಐತಿಹಾಸಿಕ ಕಾದಂಬರಿಕಾರರು ಮತ್ತು ಪ್ರಾಚೀನ ವಸ್ತುಗಳ ಸಂಶೋಧಕರಿಗೆ ಒಳ್ಳೆಯ ಮಾಹಿತಿಯನ್ನು ದೊರಕಿಸುತ್ತವೆ.

**ಶ್ರೀ ಬಿ. ಷಣ್ಮುಖಾಚಾರ್ಯ**

(೩ನೇ ಪುಟದಿಂದ)

ವಿಷಯಗಳು ಶುಕ್ಲಯಜುರ್ವೇದದಲ್ಲಿರುವಂತೆಯೇ ಇದ್ದರೂ, ಅವುಗಳ ವಿವರಣ ರೀತಿಯೂ ಅನುಕ್ರಮಣವೂ ಭಿನ್ನವಾಗಿದೆ. ರಾಜಸೂಯ, ವಾಜಪೇಯ, ಜ್ಯೋತಿಷ್ಟೋಮ ಮೊದಲಾದ ಯಜ್ಞಗಳ ವಿವರಣೆ ಇಲ್ಲಿ ಪ್ರಧಾನವಾದುದು.

ಸಾಮವೇದ ಉದ್ಗಾತೃವೇದ. ಭಗವಂತನು ಮಧುರವಾದ ಗಾನದಿಂದ ತೃಪ್ತಿಹೊಂದುತ್ತಾನೆಂಬುದು ಹಿಂದಿನಿಂದ ಅಂಗೀಕೃತವಾದ ವಿಷಯ. ಅದುದರಿಂದಲೇ ಈ ವೇದಕ್ಕೆ ವಿಶೇಷ ಪ್ರಾಶಸ್ತ್ಯ. ಈ ಸಂಹಿತೆಯಲ್ಲಿ ಒಟ್ಟು ೧೮೭೫ ಮಂತ್ರಗಳಿವೆ. ಇವುಗಳಲ್ಲಿ ೭೫ ವಿನಾ ಉಳಿದ ೧೮೦೦ ಮಂತ್ರಗಳು ಋಗ್ವೇದದಿಂದಲೇ ಆರಿಸಿಕೊಂಡುದು. ಇವು ಪೂರ್ವಾರ್ಚಿಕ, ಉತ್ತರಾರ್ಚಿಕ ಎಂಬ ಎರಡು ಭಾಗವಾಗಿ ವಿಭಾಗವಾಗಿದೆ. ಪೂರ್ವಾರ್ಚಿಕೆಯು ೬ ಪ್ರಪಾಠಕಗಳಾಗಿಯು ಒಂದೊಂದು ಪ್ರಪಾಠಕವೂ ೧೦ ಛಂದಸ್ಸುಗಳಿಂದ ಕೂಡಿದುದಾಗಿಯು ಇವೆ. ಪೂರ್ವಾರ್ಚಿಕೆಗೆ ಛಂದ, ಛಂದಸೀ, ಛಂದಸಿಕಾ ಎಂಬ ಹೆಸರುಗಳೂ ಉಂಟು. ಪೂರ್ವಾರ್ಚಿಕೆಯು ಆಗ್ನೇಯ, ಐಂದ್ರ, ಪವಮಾನ, ಅರಣ್ಯ ಶುಕ್ರೀಯ ಎಂಬ ಐದು ಭಾಗಗಳಾಗಿವೆ. ಅವು ಆಯಾ ದೇವತಾತ್ಮಕಗಳಾಗಿವೆ. (ಆ ಮಂತ್ರಗಳು ಅವರಿಂದ ದೃಷ್ಟವಾಯಿತೆಂದು ಅಭಿಪ್ರಾಯ) ಋಕ್ಕುಗಳು ಗಾನರೂಪವಾದಾಗ ಸಾಮವೆನಿಸಿಕೊಳ್ಳುತ್ತವೆ. ಪೂರ್ವಾರ್ಚಿಕೆಯ ಸಾಮಗಳಿಗೆ ಪ್ರಕೃತಿಯೆಂದೂ, ಉತ್ತರಾರ್ಚಿಕೆಯ ಸಾಮಗಳಿಗೆ ಊಹ ಅಥವಾ ರಹಸ್ಯವೆಂದೂ ಹೆಸರು. ಉತ್ತರಾರ್ಚಿಕೆಗಳಲ್ಲಿ ಮೂರು ಛಂದಗಳು ಒಟ್ಟಾಗಿರುತ್ತವೆ. ಇವುಗಳಲ್ಲಿ ಮೊದಲನೆಯದು ಪೂರ್ವಾರ್ಚಿಕೆಯಿಂದ ಆರಿಸಿಕೊಂಡುದು. ಪೂರ್ವಾರ್ಚಿಕೆಗಳ ಕೊನೆಯಲ್ಲಿ ಮಹಾನಾಮ್ನಿಗಳು ಬರುವುವು. ಇವೂ ಇದರ ಭಾಗವೆಂದು ಕೆಲವರೂ ಭಿನ್ನವೆಂದು ಕೆಲವರೂ ಅಭಿಪ್ರಾಯಪಡುತ್ತಾರೆ. ಉತ್ತರಾರ್ಚಿಕೆಗಳಲ್ಲಿ ದಶರಾತ್ರ, ಸಂವತ್ಸರ, ಏಕಾಹ, ಅಹೀನ, ಸತ್ರ, ಪ್ರಾಯಶ್ಚಿತ್ತ, ಕ್ಷುದ್ರ ಮೊದಲಾದ ವಿಷಯಕವಾದ ಭಾಗಗಳಿವೆ.

ಮಂತ್ರಗಳನ್ನು ಒಂದು ಕ್ರಮದಲ್ಲಿ ಸೇರಿಸಿ ಹಾಡುವದಕ್ಕೆ ಗಾನವೆಂದು ಹೆಸರು. ಋಗ್ವೇದ ಮಂತ್ರಗಳನ್ನೂ ಸೂಕ್ತಗಳನ್ನು ಉದಾತ್ತ ಅನುದಾತ್ತ ಸ್ವರಿತ ಎಂಬ ತ್ರಿಸ್ವರಗಳಿಂದ ಹಾಡುವುದು ಒಂದು ಕ್ರಮ. ಸಂಗೀತ ಶಾಸ್ತ್ರದ ಸಪ್ತಸ್ವರಗಳಾದ ಪಂಚಮ, ಮಧ್ಯಮ ಗಾಂಧಾರ, ಋಷಭ, ಷಡ್ಜ, ಧೈವತ, ನಿಷಾದಗಳಿಗೆ ಅನುಗುಣವಾಗಿ ಕೃಷ್ಟ, ಪ್ರಥಮ, ದ್ವಿತೀಯ, ತೃತೀಯ, ಚತುರ್ಥ ಪಂಚಮ, ಷಷ್ಠ—ಎಂಬ ಸಪ್ತಸ್ವರಗಳ ಸಹಾಯದಿಂದ ಗಾನಮಾಡುವುದು ಮತ್ತೊಂದು ಕ್ರಮ. ಸಾಮಗಾನದಲ್ಲಿ ಎರಡನೆಯ ಕ್ರಮವನ್ನು ಅಂಗೀಕರಿಸಿದೆ. ಈ ಸಾಮಗಾನವೇ ಮುಂದಿನ ಭಾರತೀಯ ಸಂಗೀತ ಶಾಸ್ತ್ರಕ್ಕೆ ಅಡಿಗಲ್ಲೆಂಬುದು ವಿಮರ್ಶಕರ ಅಭಿಪ್ರಾಯ.

ಅಥರ್ವವೇದ ಬ್ರಹ್ಮವೇದ. ಇದು ಅರ್ವಾಚೀನವಾದುದು. ಸಂಹಿತೆ ಮತ್ತು ಬ್ರಾಹ್ಮಣಗಳ ಸಂಧಿಕಾಲಕ್ಕೆ ಸೇರಿದುದು ಎಂದು ವಿಮರ್ಶಕರ ಅಭಿಪ್ರಾಯ. 'ತ್ರಯಸ್ತ್ರಯೀ' ಎಂಬ ಮಾತು ಬಹುಕಾಲದವರೆಗೆ ವೇದಗಳು ಮೂರು ಮಾತ್ರವಾಗಿತ್ತೆಂಬುದನ್ನು ಸೂಚಿಸುತ್ತದೆ. ಸಾಯಣರು ಕೂಡ ಅಥರ್ವವೇದವನ್ನು ಬ್ರಹ್ಮವೇದವೆಂದು ಮೊದಲು ಸಿದ್ಧಾಂತ ಮಾಡಿದೆ ಅಥರ್ವ ಭಾಷ್ಯದ ಉಪೋದ್ಘಾತದಲ್ಲಿ ಮಾತ್ರ ಅಥರ್ವವೇದಕ್ಕೆ ವೇದ ಪ್ರತಿಪಕ್ಷವಾದ ಅನೇಕ ವಿಷಯಗಳನ್ನು ಉದ್ಧರಣಮಾಡಿ ಅವುಗಳನ್ನು ಖಂಡಿಸಿ ಅದಕ್ಕೆ ವೇದತ್ವ ಸಿದ್ಧಿಯನ್ನು ಸಾಧಿಸಿದ್ದಾರೆ. ಅಥರ್ವವೇದ ಜನಸಾಮಾನ್ಯರ ವೇದ. ಮೊದಲ ಮೂರು ವೇದಗಳು ವಿಶೇಷವಾಗಿ ಆಮುಷ್ಮಿಕವಾದರೆ ಇದರ ಗುರಿ ಐಹಿಕಾಮುಷ್ಮಿಕಗಳೆರಡೂ. ಈ ವೇದವು ಮೂರು ಲೋಕಗಳಲ್ಲಿ ಭೂಲೋಕವೇ ಶ್ರೇಷ್ಠತಮವೆಂದು ಸಾರಿತು. ಇದಕ್ಕೆ ಅಥರ್ವವೇದ ಅಥರ್ವಾಂಗಿರಸ, ಆಂಗೀರಸ, ಭೃಗ್ವಂಗೀರಸ, ಭೃಗುವಿಸ್ತರ, ಬ್ರಹ್ಮವೇದ, ಭೈಷಜ್ಯವೇದ, ಅಥರ್ವವೇದ ಕ್ಷತ್ರವೇದ, ಎಂಬ ಅನೇಕ ಹೆಸರುಗಳಿವೆ. ಇವು ಇಲ್ಲಿಯ ಮಂತ್ರದ್ರಷ್ಟಾರರ ಮತ್ತು ವಿಷಯಗಳ ಆಧಾರದ ಮೇಲೆ ಬಂದ ಹೆಸರುಗಳೆಂದು ಹೇಳಬಹುದು. ಇದರಲ್ಲಿ ಅಥರ್ವಣ ಋಷಿಗಳಿಂದ ಸುಮಾರು ೧೭೫ ಸೂಕ್ತಗಳೂ ಅಥರ್ವಾಂಗೀರಸದಿಂದ ೧೭ ಸೂಕ್ತಗಳೂ, ಅಂಗಿರಸದಿಂದ ೧೫ ಸೂಕ್ತಗಳೂ, ಬ್ರಹ್ಮನ್ ಋಷಿಗಳಿಂದ ೧೦೦ ಸೂಕ್ತಗಳೂ ಸಂಗ್ರಹೀತವಾಗಿವೆ. ಇದನ್ನು ಬ್ರಹ್ಮವೇದವೆಂದು ಕರೆಯುವುದರಲ್ಲಿ ವಿಶೇಷಾರ್ಥವಿದೆ. ಬ್ರಹ್ಮನೆಂಬ ಋತ್ವಿಕ್ ಯಾವ ವಿಘ್ನವೂ ಇಲ್ಲದೆ ಸುರಕ್ಷಿತವಾಗಿ ನೋಡಿಕೊಳ್ಳುವ ಅವೇಕ್ಷಕ. ಈ ವೇದದಲ್ಲಿ ಯಜ್ಞವಿಘ್ನಕರರಾದ ರಾಕ್ಷಸರು, ಗಂಧರ್ವರು, ಅಪ್ಸರರು, ಪಿಶಾಚಿಗಳು, ಮುಂತಾದ ದುಷ್ಟ ಶಕ್ತಿಗಳನ್ನು ದಮನಮಾಡುವ ಮಂತ್ರಗಳಿವೆ. ಇವುಗಳಿಂದ ಬ್ರಹ್ಮನು ತನ್ನ ಕರ್ತವ್ಯವನ್ನು ಸಾಂಗವಾಗಿ ನಿರ್ವಹಿಸಬಹುದು. ಅಥರ್ವವೇದದಲ್ಲಿ 'ಭೈಷಜ್ಯಾನಿ' ಎಂಬ ಕೆಲವು ಮಂತ್ರಗಳಿವೆ. ಇವು ಅನೇಕ ರೋಗರುಜಿನಗಳ ಪರಿಹಾರರೂಪವಾದುವು. ಇವೇ ಮುಂದಿನ ಭಾರತೀಯ ವೈದ್ಯಶಾಸ್ತ್ರಕ್ಕೆ ಮೂಲಾಧಾರವೆಂದು ಹೇಳಬಹುದು. ಹಾಗೆಯೇ 'ರಾಜಕರ್ಮಾಣಿ' ಎಂಬ ಮಂತ್ರಗಳು ರಾಜಕೀಯ ವಿಷಯಗಳಿಗೆ ಸಂಬಂಧಪಟ್ಟವಾಗಿವೆ. ಇವೇ ಮುಂದಿನ ಅರ್ಥಶಾಸ್ತ್ರ ನೀತಿಶಾಸ್ತ್ರಗಳಿಗೆ ತಳಹದಿಯಾಗಿವೆ.

ಅಥರ್ವ ಸಂಹಿತೆಯು ೨೦ ಕಾಂಡಗಳಾಗಿ ಭಾಗವಾಗಿದೆ. ಕಾಂಡಗಳು ಅನುವಾಕಗಳಾಗಿಯೂ ಸೂಕ್ತಗಳಾಗಿಯೂ ಮಂತ್ರಗಳಾಗಿಯೂ ವಿಭಕ್ತವಾಗಿವೆ. ಒಂದೊಂದು ಕಾಂಡದಲ್ಲಿರುವ ಸೂಕ್ತಗಳ ಮತ್ತು ಮಂತ್ರಗಳ ಸಂಖ್ಯೆಯಲ್ಲಿ ಯಾವ ಕ್ರಮವೂ ಇಲ್ಲ. ಒಂದು ಸೂಕ್ತದಿಂದ ನೂರ ನಲವತ್ತು ಮೂರು ಸೂಕ್ತದವರೆಗೂ ಮೂವತ್ತು ಮಂತ್ರಗಳಿಂದ ೮೯ ಮಂತ್ರಗಳವರೆಗೂ ಇರುವುದುಂಟು. ಅಥರ್ವ ವೇದವು ಮೊದಲು ೧೮ ಕಾಂಡಗಳಿಂದ ಕೂಡಿತ್ತೆಂದೂ ಅದಕ್ಕೆ ವೇದಸ್ಥಾನವನ್ನು ದೊರಕಿಸಲು ಋಗ್ವೇದದಿಂದ ಎರಡು ಕಾಂಡಗಳು ಸೇರಿಸಲ್ಪಟ್ಟಿರಬೇಕೆಂದೂ ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಯಜುಸ್ಸಾಮಗಳಂತೆಯೇ ಇಲ್ಲಿಯೂ ಬಹುಭಾಗ ಋಗ್ವೇದದಿಂದ ಆರಿಸಲ್ಪಟ್ಟಿದೆ. ಇಲ್ಲಿರುವ ಸುಮಾರು ೬೦೦೦ ಮಂತ್ರಗಳಲ್ಲಿ ೧೨೦೦ ಮಂತ್ರಗಳು ಋಗ್ವೇದದ ಭಾಗಗಳು. ವಿಷಯದಲ್ಲಿಯೂ ಈ ಎರಡು ವೇದಗಳಿಗೂ ಅನೇಕೆಡೆಗಳಲ್ಲಿ ಸಾಮರಸ್ಯ ಕಂಡು ಬರುತ್ತದೆ.

ಒಂದು ದೃಷ್ಟಿಯಿಂದ ಅಥರ್ವವೇದವು ಇತರ ವೇದಗಳಿಗಿಂತ ಆಕರ್ಷಕವಾಗಿದೆ. ಇದು ಬರಿಯ ಪ್ರಾರ್ಥನಾರೂಪವಾಗಿಯೇ ಇರದೆ ಆಕಾಲದ ಜನರ ಆಚಾರ ವ್ಯವಹಾರಗಳ ಪ್ರತ್ಯಕ್ಷ ಪರಿಚಯ ಮಾಡಿಸುತ್ತದೆ. ಇಲ್ಲಿರುವ ಒಂದೊಂದು ಸ್ತೋತ್ರವೂ ಪ್ರತ್ಯೇಕ ಫಲದೃಷ್ಟಿಯಿಂದ ಕೂಡಿದೆ. ಅರ್ಥಿಯು ತನ್ನ ಇಷ್ಟಾರ್ಥಸಿದ್ಧಿಗಾಗಿ ಅಂದರೆ ದೀರ್ಘಾಯುಸ್ಸು ರೋಗವಿಮೋಚನ,ಯಂತ್ರಸಿದ್ಧಿ, ಐಶ್ವರ್ಯಪ್ರಾಪ್ತಿ, ಶತ್ರುನಾಶ, ಪ್ರೇಮಸಾಧನೆ, ಸಾಮಾನ್ಯ ಈತಿ ಬಾಧೆಗಳ ಪರಿಹಾರ (ಕೇಶಾಭಿವೃದ್ಧಿಗೂ ಕೂಡ) ಮೊದಲಾದುವುಗಳಿಗೆ ಸ್ವಂತವಾಗಿಯೋ ಪುರೋಹಿತ ಅಥವಾ ಋತ್ವಿಕ್ಕುಗಳ ಮೂಲಕವೋ ಸಲ್ಲಿಸುವ ಸ್ತೋತ್ರಗಳವು. ಇವು ಋಗ್ವೇದದಲ್ಲಿ ಬೀಜರೂಪದಲ್ಲಿದ್ದ ತಾತ್ತ್ವಿಕ ದೃಷ್ಟಿಯ ಪರಿಪೂರ್ಣತೆಯನ್ನು ಪ್ರದರ್ಶಿಸುವುವು. ಇಲ್ಲಿ ಬರುವ ಶುಕ್ಲೇಂದ್ರಜಾಲ, ಕೃಷ್ಣೇಂದ್ರಜಾಲ ವಿಷಯಕವಾದ ಮಂತ್ರಗಳು ಬಹು ವಿಸ್ಮಯಕಾರಿಯಾಗಿವೆ.

ಬ್ರಾಹ್ಮಣಗಳು : ವೇದಸಾಹಿತ್ಯದ ದ್ವಿತೀಯ ಸ್ಕಂಧ ಬ್ರಾಹ್ಮಣಗಳು. ಬ್ರಾಹ್ಮಣ ಶಬ್ದವನ್ನು ಬ್ರಾಹ್ಮಣರಿಂದ ರಚಿತವಾದುದು, ಬ್ರಹ್ಮ ಅಥವಾ ಪುರೋಹಿತರಿಗೆ ಬೇಕಾದುದು, ಪರಬ್ರಹ್ಮವಿಷಯಕವಾದುದು ಎಂಬ ಭಿನ್ನ ಭಿನ್ನ ರೀತಿಯಲ್ಲಿ ವ್ಯುತ್ಪನ್ನ ಮಾಡಬಹುದು. ಸಂಹಿತೆಯ ಮಂತ್ರಗಳನ್ನು ಯಜ್ಞಯಾಗಾದಿಗಳಲ್ಲಿ ಉಪಯೋಗಿಸುವ ವಿಧಾನವನ್ನು ತಿಳಿಸುವುವು ಬ್ರಾಹ್ಮಣಗಳು.

ಇವು ಸಂಹಿತೆಗಳಿಗಿಂತ ಭಿನ್ನವಾದ ಪ್ರಪಂಚವನ್ನು ಪ್ರದರ್ಶಿಸುತ್ತವೆ. ವಿಸ್ತಾರವಾದ ಯಜ್ಞವಿದ್ಯೆಯ ಅಸ್ತಿತ್ವವನ್ನೂ ಜ್ಞಾನವನ್ನೂ ಊಹಿಸಿಕೊಂಡು ಅದರ ಆಧಾರದ ಮೇಲೆ ಅವು ಮುನ್ನಡೆಯುತ್ತವೆ. ಇವು ಪ್ರಾರ್ಥನಾರೂಪದಲ್ಲಿದ್ದರೂ ಯಜ್ಞ ಕಾರ್ಯಗಳ ಅತಿಸೂಕ್ಷ್ಮ ವಿವರಣೆಗಳನ್ನೂ ಮಿತಿಮೀರಿದ ಪವಿತ್ರತೆ ಆವಶ್ಯಕತೆ ಪ್ರಾಮುಖ್ಯವನ್ನೂ ಒತ್ತಿ ಒತ್ತಿ ಹೇಳುತ್ತವೆ. ಮಂತ್ರಾರ್ಥಗಳ ವಿಚಾರ, ಅವುಗಳನ್ನು ಉಪಯೋಗಿಸುವ ವಿಧ ಯಜ್ಞ ವಿಧಿಯಲ್ಲಿ ಅದು ಪ್ರಯೋಗವಾಗುವ ರೀತಿ, ಅವುಗಳ ರಹಸ್ಯಾರ್ಥ ವಿವರಣೆ–ಮೊದಲಾದುವು ಬ್ರಾಹ್ಮಣಗಳಲ್ಲಿ ಉಕ್ತವಾದ ವಿಷಯಗಳು. ಅವುಗಳ ಮುಖ್ಯ ಉದ್ದೇಶ ಯಜ್ಞ ಕರ್ಮಗಳ ವಿಧಿಯನ್ನು ವಿವರಿಸುವುದಾದರೂ ಅವುಗಳಲ್ಲಿ ಅನೇಕ ಶಬ್ದ ವಿಷಯಕವಾದ ಅನುಭಾವಿಕವಾದ ದಾರ್ಶನಿಕವಾದ ಊಹಾಪೋಹಗಳೂ ವಿಚಾರಗಳೂ ಚರ್ಚೆಗಳೂ ಅಲ್ಲಿ ಬರುತ್ತವೆ. ಆದರೂ ಬ್ರಾಹ್ಮಣಗಳು ಗದ್ಯಗ್ರಂಥಗಳಾದುದರಿಂದ ಸಂಸ್ಕೃತಗದ್ಯದ ಪ್ರಾಚೀನರೂಪವನ್ನು ಪರಿಚಯ ಮಾಡಿಸುವುವು. ಶಬ್ದ ಶಾಸ್ತ್ರ ವಿಮರ್ಶನ ದೃಷ್ಟಿಯಿಂದ ಅವುಗಳಿಗೆ ಪ್ರಮುಖಸ್ಥಾನವುಂಟು.

ವೇದಗಳೇ ಅಲ್ಲದೆ ವೇದಶಾಖೆಗಳೂ ತಮ್ಮ ಪ್ರತ್ಯೇಕ ಬ್ರಾಹ್ಮಣಗಳನ್ನು ಹೊಂದಿವೆ. ಋಗ್ವೇದದ ಶಾಕಲ ಶಾಖೆಗೆ ಸೇರಿದುದು ಐತರೇಯ ಬ್ರಾಹ್ಮಣ. ಭಾಷ್ಕಲ ಶಾಖೆಗೆ ಸೇರಿದುದು ಕೌಷೀತಕಿ. ಸಾಯಣರು ಐತರೇಯ ಬ್ರಾಹ್ಮಣದ ಉತ್ಪತ್ತಿಯ ವಿಷಯವಾಗಿ ತಮ್ಮ ಉಪೋದ್ಘಾತದಲ್ಲಿ ಮುಂದಿನ ಸ್ವಾರಸ್ಯವಾದ ಕತೆಯನ್ನು ತಿಳಿಸಿದ್ದಾರೆ. ಒಬ್ಬ ಋಷಿಗೆ ಅನೇಕ ಪತ್ನಿಯರಿದ್ದರು. ಅವರಲ್ಲಿ ಒಬ್ಬಳ ಹೆಸರು ಇತರಾ ಎಂದು ಅವಳಿಗೆ ಮಹಿದಾಸನೆಂಬ ಮಗನಿದ್ದನು. ತಂದೆಯು ತನ್ನ ಇತರ ಮಕ್ಕಳನ್ನು ವಿಶೇಷ ಪ್ರೀತಿಸಿ ಮಹೀದಾಸನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಗೌರವಿಸಲಿಲ್ಲ. ಇದರಿಂದ ಮನನೊಂದ ಇತರೆಯು ಭೂದೇವಿಯನ್ನು ಪ್ರಾರ್ಥಿಸಲು, ಅವಳು ಪ್ರತ್ಯಕ್ಷಳಾಗಿ ಮಹಿದಾಸನಿಗೆ ಸುವರ್ಣ ಸಿಂಹಾಸನವನ್ನಿತ್ತು, ಅದರ ಮೇಲೆ ಕೂಡಿಸಿ ಅವನನ್ನು ಉದ್ದಾಮಪಂಡಿತನನ್ನಾಗಿ ಮಾಡಿದಳು. ಈ ಮಹಿದಾಸ ಐತರೇಯನಿಗೆ ಈ ಬ್ರಾಹ್ಮಣವೂ ಆರಣ್ಯಕವೂ ದೃಷ್ಟವಾಗಿ ಅವನ ಹೆಸರನ್ನು ಪಡೆದವು.

ಈ ಬ್ರಾಹ್ಮಣವು ಎಂಟು ಪಂಚಿಕೆಗಳಾಗಿಯೂ ೪೦ ಅಧ್ಯಾಯಗಳಾಗಿಯೂ ವಿಭಾಗವಾಗಿದೆ ೧ ರಿಂದ ೧೩ ಅಧ್ಯಾಯಗಳು ಅಗ್ನಿಷ್ಟೋಮ ಯಜ್ಞದಲ್ಲಿ ಹೋತೃವಿನ ಕಾರ್ಯವನ್ನು ವಿವರಿಸುತ್ತವೆ. ೧೪ರಲ್ಲಿ ಅಗ್ನಿಷ್ಟೋಮ ಶಬ್ದಾರ್ಥದ ವಿವರಣೆಯೂ ೧೫ ರಿಂದ ೧೭ ರಲ್ಲಿಉಕ್ಥ್ಯ, ಷೋಡಶ, ಅತಿರಾತ್ರ ಮೊದಲಾದ ಯಜ್ಞಗಳ ವಿಧಿಯೂ, ೧೮ ರಲ್ಲಿ ಹೋತೃಕರ್ತವ್ಯ ನಿರೂಪಣೆಯೂ ೧೯ ರಿಂದ ೨೪ ರಲ್ಲಿ ಉಪಯಜ್ಞಗಳಲ್ಲಿ ಹೋತೃವಿನ ಕಾರ್ಯವಿಧಾನವೂ ೨೫ ರಲ್ಲಿ ಅಗ್ನಿಷ್ಟೋಮ ಯಜ್ಞದಲ್ಲಿ ಯಜಮಾನನು ಮಾಡಬೇಕಾದ ಪ್ರಾಯಶ್ಚಿತ್ತ ಕರ್ಮದ ಸ್ವರೂಪ ಮತ್ತು ಬ್ರಹ್ಮನ ಕರ್ತವ್ಯ ವಿಷಯಗಳೂ ೨೬ ರಿಂದ ೩೦ ರಲ್ಲಿ ಸೋಮ ಯಜ್ಞದ ಉಪ ಋತ್ವಿಕ್ಕುಗಳಾದ ಗಾವಸ್ತುತ್, ಸುಬ್ರಹ್ಮಣ್ಯ ಮೊದಲಾದವರ ಕಾರ್ಯ ರೀತಿಗಳೂ ೩೦ ರಿಂದ ೪೦ ರಲ್ಲಿ ಕ್ಷತ್ರಿಯ ವಿಹಿತವಾದ ಯಜ್ಞಗಳೂ, ಬ್ರಹ್ಮ ಕ್ಷತ್ರಿಯ ಪರಸ್ಪರ ಸಂಬಂಧಗಳೂ ಉಕ್ತವಾಗಿವೆ. ಕೌಷೀತಕಿಯ ೩೦ ಅಧ್ಯಾಯಗಳಲ್ಲಿ ದರ್ಶಪೂರ್ಣಮಾಸ ಮತ್ತು ಸೋಮಯಾಗಗಳ ವಿಷಯ ಹೇಳಿದೆ.

ಶುಕ್ಲ ಯಜುರ್ವೇದಕ್ಕೆ ಸೇರಿದ ಶತಪಥ ಬ್ರಾಹ್ಮಣವು ವೈದಿಕ ಸಾಹಿತ್ಯದಲ್ಲಿ ಬಹುಪ್ರಧಾನವಾದುದಾಗಿದೆ. ಇದರಲ್ಲಿ ಒಂದು ನೂರು ಅಧ್ಯಾಯಗಳಿರುವುದರಿಂದ ಇದಕ್ಕೆ ಈ ಹೆಸರು ಬಂದಿರಬೇಕು. ಕೃಷ್ಣ ಯಜುರ್ವೇದಕ್ಕೆ ತೈತ್ತಿರೀಯ ಬ್ರಾಹ್ಮಣವೆಂಬ ಪ್ರತ್ಯೇಕ ಬ್ರಾಹ್ಮಣವಿದೆ. ಕಠ ಮತ್ತು ಮೈತ್ರಾವರುಣ ಶಾಖೆಗೆ ಪ್ರತ್ಯೇಕವಾದ ಬ್ರಾಹ್ಮಣಗಳಿಲ್ಲ. ಸಂಹಿತೆಗೆ ಸೇರಿದ ಗದ್ಯ ಭಾಗಗಳೇ ಈ ಶಾಖೆಗಳ ಬ್ರಾಹ್ಮಣಗಳಾಗಿವೆ.

ಸಾಮವೇದಕ್ಕೆ ಅನೇಕ ಬ್ರಾಹ್ಮಣಗಳಿವೆ. ಇವುಗಳಲ್ಲಿ ತಾಂಡ್ಯ ಬ್ರಾಹ್ಮಣ, ಷಡ್ವಿಂಶ ಬ್ರಾಹ್ಮಣ, ಜೈಮಿನೀ ಅಥವಾ ತಲವಕಾರ ಬ್ರಾಹ್ಮಣ ಮುಖ್ಯವಾದವು. ಇವಲ್ಲದೆ ಮಂತ್ರಬ್ರಾಹ್ಮಣ, ದೈವತ ಬ್ರಾಹ್ಮಣ, ಸಾಮವಿಧಾನ ಬ್ರಾಹ್ಮಣ, ಸಂಹಿತೋಪನಿಷದ್ಬ್ರಾಹ್ಮಣ, ಆರ್ಷ ಬ್ರಾಹ್ಮಣ, ಮತ್ತು ವಂಶ ಬ್ರಾಹ್ಮಣ ಎಂಬುವು ಈ ವೇದಕ್ಕೆ ಸೇರಿದವು. ತಾಂಡ್ಯ ಬ್ರಾಹ್ಮಣದಲ್ಲಿ ೨೫ ಅಧ್ಯಾಯಗಳಿವೆ. ಷಡ್ವಿಂಶ ಬ್ರಾಹ್ಮಣ ಇದರ ಉತ್ತರ ಭಾಗದಂತಿದೆ.

ಗೋಪಥ ಬ್ರಾಹ್ಮಣವು ಅಥರ್ವವೇದಕ್ಕೆ ಸಂಬಂಧಪಟ್ಟುದು. ಈ ಬ್ರಾಹ್ಮಣವು ಸಂಹಿತೆಯ ಮಂತ್ರಗಳ ವಿನಿಯೋಗವನ್ನು ಸೂಚಿಸುವ ಬದಲು ಕೌಶಿಕ ಸೂತ್ರಕ್ಕನುಗುಣವಾಗಿರುವುದು ಇದರ ವೈಶಿಷ್ಟ್ಯ.

ಮೇಲೆ ತಿಳಿಸಿರುವಂತೆ ಬ್ರಾಹ್ಮಣಗಳು ಸಂಹಿತೆಗಳಿಗಿಂತ ಕೆಲವು ವಿಲಕ್ಷಣ ಪ್ರಯೋಜನಗಳನ್ನುಳ್ಳವಾಗಿವೆ. ಭಾರತದ ಅತ್ಯಂತ ಪ್ರಾಚೀನ ವಾದ ಗದ್ಯ ಶೈಲಿಯ ಪರಿಚಯ ಇದರಿಂದ ಆಗುತ್ತದೆ. ಮಂತ್ರವಿನಿಯೋಗವನ್ನು ತಿಳಿಸುವ ಸಂದರ್ಭಗಳಲ್ಲಿ ಯಾಗಾದಿಗಳ ವಿವರಣೆಗಳೇ ಅಲ್ಲದೆ ಕೆಲವು ಶಬ್ದಗಳ ನಿರ್ವಚನವನ್ನೂ ಅವುಗಳ ಗೂಢಾರ್ಥವನ್ನೂ, ಅವುಗಳನ್ನು ಪ್ರಯೋಗ ಮಾಡಿರುವ ರೀತಿಯ ಆಖ್ಯಾನವನ್ನೂ ತಿಳಿಸುತ್ತವೆ. ಇಲ್ಲಿ ಬರುವ ಶಬ್ದ ವಿಷಯಕವಾದ ವಿವರಣೆಗಳನ್ನು ಜಿಜ್ಞಾಸೆಗಳನ್ನು ಒಟ್ಟುಗೂಡಿಸಿದರೆ ಪ್ರತ್ಯೇಕವಾದ ನಿರುಕ್ತ ಗ್ರಂಥವಾಗುವುದರಲ್ಲಿ ಸಂದೇಹವಿಲ್ಲ. ಪ್ರಥಮ ನಿರುಕ್ತಕಾರರಾದ ಯಾಸ್ಕರೇ ಇವುಗಳನ್ನು ತಮ್ಮ ಗ್ರಂಥದಲ್ಲಿ 'ಇತೀಹ ವಿಜ್ಞಾಯತೆ' 'ಇತಿಬ್ರಾಹ್ಮಣಮ್' ಎಂಬುದಾಗಿ ಅನೇಕ ಕಡೆಗಳಲ್ಲಿ ಉದಹರಿಸಿದ್ದಾರೆ. ಅಲ್ಲದೆ ಬ್ರಾಹ್ಮಣಗಳಲ್ಲಿ ಮುಂದಿನ ಇತಿಹಾಸ ಕಥೆಗಳ ಮೂಲವನ್ನು ಕಾಣಬಹುದು. ಶತಪಥ ಬ್ರಾಹ್ಮಣದಲ್ಲಿ ಕುರುವಂಶದ ಪ್ರಖ್ಯಾತ ರಾಜನಾದ ಜನಮೇಜಯನ ಹೆಸರು ಮೊತ್ತಮೊದಲು ಸೂಚಿತವಾಗಿದೆ. ಪಾಂಡವರ ಹೆಸರು ಈ ಸಾಹಿತ್ಯಕ್ಕೆ ಪರಿಚಯವಿಲ್ಲ, ಇಲ್ಲಿ ಅರ್ಜುನನೂ ಇಂದ್ರನ ಮಗನೇ ಆಗಿರುವುದರಿಂದ ಆತನ ಮೂಲ ಇಲ್ಲಿಂದಲೇ ಆಗಿರಬೇಕು. ಕಾಳಿದಾಸನ 'ವಿಕ್ರಮೋರ್ವಶೀಯ' ಮತ್ತು 'ಶಾಕುಂತಲ'ದ ಮೂಲವನ್ನು ಇಲ್ಲಿ ಕಾಣಬಹುದೆಂಬುದು ಕೆಲವರ ಮತ. ಊರ್ವಶೀ ಶಬ್ದವು ಆಧ್ಯಾತ್ಮಿಕವಾದ ಅರ್ಥವುಳ್ಳದೆಂದು ಮತ್ತೆ ಕೆಲವರ ಅಭಿಪ್ರಾಯ.

ಬ್ರಾಹ್ಮಣಗಳು ಭಾರತೀಯ ಮಾನಸಿಕ ಬೆಳವಣಿಗೆಯ ಮುಖ್ಯವಾದ ಭಾಗಗಳನ್ನು ಹೊರಗೆಡಹುವುವಾದರೂ ಸಾಹಿತ್ಯ ದೃಷ್ಟಿಯಿಂದ ಬಹು ನಿರಾಶಾಯುತವಾಗಿವೆ. ಭಾವನಾಲಹರಿ, ಉಕ್ತಿವೈಶಿಷ್ಟ್ಯ, ವಿಚಾರ ಸರಣಿ, ಆಶ್ಚರ್ಯಯುತವಾದ ಸಂಪ್ರದಾಯ ಪದ್ಧತಿ ಇಲ್ಲದೆ ಇಲ್ಲ. ಆದರೆ ಅವೆಲ್ಲ ಅಸ್ತವ್ಯಸ್ತವಾಗಿ ಕ್ರಮರಹಿತವಾಗಿವೆ. ಋಗ್ವೇದದಲ್ಲಿ ಕಂಡು ಬರುವ ಭಾವ ಪ್ರಖರತೆ ಇಲ್ಲಿ ಕೆಳ ಮಟ್ಟಕ್ಕೆ ಇಳಿದು, ಯಜ್ಞ ಕರ್ಮಗಳಿಗೆ ಎಲ್ಲಿಯೂ ಇಲ್ಲದ ಪ್ರಾಶಸ್ತ್ಯವನ್ನು ಆರೋಪಣೆ ಮಾಡುವ ಮನೋಭಾವವನ್ನು ಕಾಣಬಹುದಾಗಿದೆ.



# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ಕಾಯಕದ ಹಿರಿಮೆ

ಕಾಯ ಕರಗಿಸಿ ಮಾಡುವ ಕೆಲಸ, ಕಾಯಕ. ವೈಯಕ್ತಿಕ, ಜವಾಬ್ದಾರಿಯಿಂದ ನಡೆಸುವ ಸದಾಚಾರಸಂಪನ್ನತೆ. ದೈಹಿಕ ಕ್ರಿಯೆ, ದೈನಂದಿನ ನಮ್ಮ ಪ್ರಯತ್ನ, ಗೈಮೆ. ಕಾಯಕ–ಕಾಯಕದ ಬೆಳೆ, ಜೀವನಬೆಳೆ ವಿಧಿಲಿಖಿತ – ಪೂರ್ವಸಂಯೋಜಿತ, ದೈವ ಸಂಕಲ್ಪ.

ಬದುಕಿಗಾಗಿ ನಿತ್ಯ ನಡೆಸುವ ಹೋರಾಟದಲ್ಲಿ ಕಾಯಕಕ್ಕೆ ಪ್ರಥಮಸ್ಥಾನ. ಹುಟ್ಟಿದ ಮನುಷ್ಯ ಉದರನಿಮಿತ್ತ ಏನಾದರೊಂದು ಕಾಯಕ ನಡೆಸಲೇಬೇಕು.

ತನ್ನ ಜೀವನ ನಿರ್ವಹಣೆಗೆ ಹಿಡಿದೊಂದು ಕಾಯಕ ಹೇಗೆ ಸಹಾಯಕವಾಗುತ್ತದೋ ಹಾಗೆಯೇ ಆತನಾತ್ಮ ಗೌರವವನ್ನೂ ಹೆಚ್ಚಿಸುತ್ತದೆ–ಸಂತೃಪ್ತಿ, ನೆಮ್ಮದಿಯನ್ನು ದೊರಕಿಸಿಕೊಡುತ್ತದೆ. ಸಮಾಜದಲ್ಲಿ ಗಣ್ಯ ವ್ಯಕ್ತಿಯನ್ನಾಗಿ ರೂಪಿಸುವಲ್ಲಿಯೂ ಅದು ಸಹಕಾರಿಯಾಗುತ್ತದೆ. 'ತನ್ನ ಹಾಗೂ ತನ್ನವರ ಹೊಟ್ಟೆ ತುಂಬಿದರಾಯಿತು' ಎಂಬ ದೃಷ್ಟಿಯನ್ನೇ ಇರಿಸಿಕೊಂಡು ನಡೆಸುವ ಕಾಯಕ ನಮ್ಮದಾಗಿದ್ದರೂ, ಆ ಕಾಯಕ ಇನ್ನೊಬ್ಬರ ಮನನೋಯಿಸುವಂತಹುದಾಗಿದ್ದು ಅವನ ಹೊಟ್ಟೆಗೆ ಅಡ್ಡಗಾಲಿಡುವಂತಹುದಾಗಿರಬಾರದು. ನಡೆಸುವ ಕಾಯಕ ಎಂತಹುದೇ ಆಗಿದ್ದರೂ ಅದರಲ್ಲಿ ತ್ಯಾಗಶೀಲತೆ, ಧರ್ಮಬುದ್ಧಿ ಸದಾ ಜಾಗೃತವಾಗಿದ್ದು ಪಾಪಪುಣ್ಯಗಳ ಭೀತಿ ತುಂಬಿಕೊಂಡಿರಬೇಕು.

ಹುಟ್ಟಿದ ಮನುಷ್ಯ ಎಂದಾದರೊಂದು ದಿನ ಸಾಯಲೇಬೇಕು. ಸಾಯದೆ ಚಿರಂಜೀವಿಯಾಗಿರಲು ಸಾಧ್ಯವಿಲ್ಲ. ಸತ್ತಮೇಲೆ ನಾವೇನಾಗುತ್ತೇವೋ ನಮಗೆ ಗೊತ್ತಿಲ್ಲ. ನೋವು ನಲಿವಿನ ಅರಿವು ನಮಗಿರುವುದಿಲ್ಲ.

ಆದರೂ ಇಂದು ನಾವು ನಡೆಸಿರಬಹುದಾದ ಕಾಯಕಫಲ ನಮ್ಮ ಬೆನ್ನಹಿಂದೆಯೇ ಸುತ್ತುತ್ತಾ ಪುನರಪಿ ನಮ್ಮನ್ನು ಲೌಕಿಕ ಪ್ರಪಂಚಕ್ಕೆ ತರಲೆತ್ನಿಸುತ್ತದೆ. ಭವ್ಯ ಬದುಕಿನ ಮೇಲೆ ಹತೋಟಿ ಸ್ಥಾಪಿಸಿ ತನ್ನ ಪ್ರಭಾವ ಬೀರುತ್ತದೆ.

ಆಯುಮಾತ್ರದಲ್ಲಿಯೇ ಇಂದಲ್ಲದಿದ್ದರೆ ನಾಳೆ, ನಾಳೆಯಲ್ಲದಿದ್ದರೆ ಮುಂದಾದರೊಂದು ದಿನ ನಮ್ಮ ಸುಕೃತ, ದುಷ್ಕೃತ ಕಾಯಕ ಫಲ ನಮ್ಮ ಸಂತತಿ ಪರಂಪರೆಗಳ ಮೇಲೂ ಬಹು ಪರಿಣಾಮವನ್ನುಂಟುಮಾಡುತ್ತದೆ. ಅತಏವ. ನಮ್ಮ ಕಾಯಕ ಉನ್ನತ ಗುಣಮಟ್ಟದ್ದಾಗಿದ್ದು ಸಂಸ್ಕೃತಿ, ಸಂಸ್ಕಾರಕ್ಕೆ ಪೂರಕವಾಗಿ ತನ್ನ ದ್ವಾರವಾಗುವುದರ ಮೂಲಕ ಇನ್ನೊಬ್ಬನ ಉದ್ಧಾರ ಕಾರ್ಯದಲ್ಲೂ ಸಹಾಯಕವಾಗುವಂತಿರಬೇಕು. ಧರ್ಮ ಸಮ್ಮತವಾಗಿದ್ದು ಸಜ್ಜನಿಕೆಯ ಜನರಿಗೂ ಮೆಚ್ಚುವಂತಿರಬೇಕು. ಆಗ ನಾವು ಕಾಯಕದ ತತ್ಫಲ ಸ್ವರೂಪೇಣಾದರೂ ದೈವಕೃಪೆಗೆ ಪಾತ್ರರಾಗುವುದಲ್ಲದೆ, ಮೋಕ್ಷಸಾಧನೆಯ ಮಹಾ ಕಾರ್ಯದಲ್ಲೂ ಮುನ್ನಡೆಯುತ್ತೇವೆ. ಮಾಡಲು ಮನಸ್ಸಿಲ್ಲದೆಯೂ ಯಾ ಮಾಡುವ ಕೆಲಸವಿಲ್ಲದೆ ಆಲಸ್ಯದಿಂದ ಕಷ್ಟವೆಂದು ಕೈ ಕಟ್ಟಿ ಸುಮ್ಮನೆ ಕುಳಿತರೆ ನಮ್ಮ ಹೊಟ್ಟೆ ತುಂಬುವುದಿಲ್ಲ. ನಮ್ಮನ್ನು ನಂಬಿದವರ ಹೊಟ್ಟೆ ತುಂಬಿಸಿದಂತೆಯೂ ಆಗುವುದಿಲ್ಲ. ಆತ್ಮಸ್ವಪ್ರೇರೇಪಣೆಯಿಂದ ಧೈರ್ಯಸ್ಥೈರ್ಯಗಳಿಂದ ಮುನ್ನುಗ್ಗಿ ಯಾವುದಾದರೊಂದು ಕಾಯಕ ನಡೆಸುವಲ್ಲಿ ನಾವು ಶ್ರದ್ಧೆ, ಛಲ ವಹಿಸಿ ಮುಂದಾದಲ್ಲಿ ನಮ್ಮ ಬದುಕು ಬಂಗಾರವಾಗುವುದರಲ್ಲಿ ಸಂದೇಹವಿಲ್ಲ – ಬಾಳೊಂದು ನಂದನವನವಾಗಿ, ನಂದನವನದಲ್ಲೊಂದು ಜೀವಕುಸುಮ ಅರಳಿ ಸೌರಭ ನೀಡಬೇಕಾಗಿದ್ದಲ್ಲಿ, ನಾವು ನಮ್ಮ ಕಾಯಕದ ಗುಣಮಟ್ಟವನ್ನು ಹೆಚ್ಚಿಸಿಕೊಂಡು ತತ್ತ್ವನಿಷ್ಠರಾಗಿರಬೇಕು. ಮೋಸ, ವಂಚನೆ, ಕಪಟ, ಹಿಂಸೆ, ಕ್ರೌರ್ಯ ಅನೀತಿಗಳು ನಮ್ಮ ಕಾಯಕದಲ್ಲಿ ತಪ್ಪಿಯೂ ಸುಳಿಯಬಾರದು–

ಮಾನವ ಜೀವಿಗೆ ವಿಕಾಸವಾಗಬಲ್ಲ ಅದ್ಭುತಬುದ್ಧಿ ಶಕ್ತಿಯೊಂದಿದೆ. ಬುದ್ಧಿ ಶಕ್ತಿಯವಿಕಾಸ ಪ್ರಾರಂಭದಲ್ಲಿ ಮನೆಯವರ ಮೂಲಕ ನಡೆದು ಶಿಕ್ಷಣದ ಹಂತದಲ್ಲಿ ಆಚಾರ್ಯ. ಸದ್ಗುರು ಆಚಾರ್ಯರುಗಳಿಂದ ಸಮೀಕರಿಸಿ ಗಾಳಿಸಲ್ಪಡುತ್ತದೆ.

ಗಾಳಿಸಲ್ಪಟ್ಟು ಶುದ್ಧಗೊಂಡ ಮಾನವ ತಾನು ಮಾಡುವ ಕೆಲಸ ಕಾರ್ಯಗಳೆಲ್ಲದರಲ್ಲಿಯೂ ಸಹ ಸುಖಶಾಂತಿಗಳಲ್ಲೂ ಹೆಚ್ಚಾಗಿ ಪರಹಿತ ಹುಡುಕುತ್ತಾನೆ. ಅವನು ನಡೆಸುವ ಪ್ರತಿಯೊಂದು ಕಾಯಕವೂ ಉನ್ನತವಾಗಿದ್ದು, ತಾನು ಆತ್ಮತೃಪ್ತಿಯ ಸುಖವನ್ನುಂಡು ಇತರರಿಗೂ ಅದರ ಫಲವನ್ನುಣ್ಣಿಸುತ್ತಾನೆ.

ಇದಕ್ಕೆ ವ್ಯತಿರಿಕ್ತ ಮನಸ್ಸಿನ ಕುತ್ಸಿತ ಕಾಯಕ ನಡೆಸುವ ಮಾನವ ತಾನು ಹಗಲು ಹೊತ್ತಿನಲ್ಲಿಯೇ ಹೊಂಡಕ್ಕೆ ಬೀಳುವುದಲ್ಲದೆ ಇತರರನ್ನೂ ಗುಂಡಿಗೆ ತಳ್ಳಲು ಹವಣಿಸುತ್ತಾನೆ.

ದುಡಿಮೆ (ಕಾಯಕ) ಮಾನವನಗಳಿಕೆಯನ್ನೂ ಹೆಚ್ಚಿಸುತ್ತದೆ. ತನ್ನಾಸೆ, ಆಕಾಂಕ್ಷೆಯನ್ನೀಡೇರಿಸಿಕೊಳ್ಳುವುದರಲ್ಲಿಯೂ ಮಾನವನಿಗೆ ಸಹಾಯಕವಾಗುತ್ತದೆ. ಗಳಿಕೆ ಹೆಚ್ಚಾದಂತೆ ಮಾನವ ಉಬ್ಬುವುದು ಸಹಜ. ಆದರೆ ಹಾಗೆ ಉಬ್ಬಬಾರದು. ಉಬ್ಬಿದಲ್ಲಿ 'ನನ್ನ ಕಾಯಕದ ಫಲ ಉತ್ತಮ ಸ್ವರೂಪದ್ದಾಗಿದ್ದು ಜೀವಿತದ ಸುಖಶಾಂತಿ ಎಲ್ಲವೂ ನನ್ನದಾಗಿದೆ'ಎಂದು ಅಹಂ ಉದಯಿಸುತ್ತದೆ. ಆಗ ತನ್ನತನವನ್ನು ಕಳೆದುಕೊಳ್ಳುವ ಮಾನವ ಪಶುವಾಗಿ ವರ್ತಿಸುತ್ತಾನೆ. ಕಾಯಕದ ಗತಿ ಬದಲಾಗಿ ವಾಮಮಾರ್ಗಕ್ಕೆ ತಿರುಗಿ ಕೃತ್ರಿಮತೆ, ಕ್ರೌರ್ಯ, ಹಿಂಸೆ ಬಲಿಯುತ್ತದೆ–

ಕರ್ಮದಿಂದಲೇ ಜ್ಞಾನ, ಜ್ಞಾನದಿಂದ ಭಕ್ತಿ, ಭಕ್ತಿಯಿಂದ ವೈರಾಗ್ಯ ಎಂಬ ಸಾತ್ವಿಕ ಚಿಂತನೆ ದೂರವಾಗುತ್ತದೆ.

**ಶ್ರೀ ಪುತ್ತೂರು ವ್ಯಾಸಕೃಷ್ಣ ತಂತ್ರಿ**

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು | | | | | |
| ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಆರ್ಜಿತ | | | | | |
| ಕಲ್ಯಾಣೋತ್ಸವ | | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಸಾತ್ವಿಕ ಚಿಂತನೆ, ಮಾನವ ಜೀವನವನ್ನು ಪುನೀತಗೊಳಿಸುತ್ತದೆ. ಭವಬಂಧನಗಳಿಂದ ವಿಮುಕ್ತಿಗೊಳಿಸಿ ನಿತ್ಯಸುಖಶಾಂತಿಗಳೆಡೆಗೆ ಕರೆದೊಯ್ಯುತ್ತದೆ.

ಅತಃ ನಾವು ಕಾಯಕದ ಮಹತ್ವವನ್ನರಿತು, ಸತ್ಯಧರ್ಮ ನ್ಯಾಯಸಮ್ಮತಮಾರ್ಗದಲ್ಲಿ, ಒಂದೇ ಭೂತಾಯಿಮಕ್ಕಳಾದ ನಾವು ಒಮ್ಮತದಿಂದ ಸ್ವಹಿತಸಂರಕ್ಷಣೆಯೊಂದಿಗೆ ಪರರಿಗುಪಕಾರವಾಗುವಂತಹ ಉತ್ತಮ ಕಾಯಕದ ಆಚರಣೆಗೆ ಕಟಿಬದ್ಧರಾಗಿ, ಮಾತಿನಂತೆ ಕೃತಿ, ಕೃತಿಯಲ್ಲಿ ಅಕೃತ್ರಿಮತೆ ಮೂಡಿಸುವ ಪ್ರತಿಜ್ಞೆ ತೊಡೋಣ.

ಭಾರತೀಯ ಉನ್ನತ ಸಂಸ್ಕೃತಿಗನುಗುಣವಾಗಿ ಬಸವಣ್ಣನವರು ಸಾರಿದ "ಕಾಯಕವೇ ಕೈಲಾಸ" ನುಡಿಯಲ್ಲಿ ನಿಷ್ಠೆ ತೋರಿಸಿ ಆಳಾಗಿ ದುಡಿದು ಅರಸಾಗಿ ಉಣ್ಣೋಣವೇ? ಕೈಕೆಸರಾದರೆ ಬಾಯಿ ಮೊಸರೆಂಬ ಸತ್ಯ ಕೃತಿಗೆ ಯುವಪೀಳಿಗೆಯು ನಾವು ಯತ್ನಿಸೋಣವೇ?

---

ಧನವ ಗಳಿಸಬೇಕಿಂತಹದು–ಈ।
ಜನರಿಗೆ ಕಾಣಿಸದಂತಹದು

ಕೊಟ್ಟರೆ ತೀರದಂತಹದು–ತನ್ನ।
ಬಿಟ್ಟು ಅಗಲಿ ಇರದಂತಹದು ॥
ಕಟ್ಟಿದ ಗಂಟನು ಬಯಲೊಳಗಿಟ್ಟರೆ।
ಮುಟ್ಟರು ಆರೂ ಅಂತಹದು ॥

ಕರ್ಮವನೋಡಿಸುವಂತಹದು।
ಧರ್ಮವ ಮಾಡಿಸುವಂತಹದು ॥
ನಿರ್ಮಲವಾಗಿಸಿ ಮನಸಿನೊಳಗೆ ನಿಜ।
ಧರ್ಮವ ತೋರಿಸುವಂತಹದು ॥

ಅಜ್ಞಾನವು ಬಾರದಂತಹದು ನಿಜ।
ಸುಜ್ಞಾನವು ತೋರುವಂತಹದು ॥
ವಿಜ್ಞಾನಮೂರುತಿ ಪುರಂದರವಿಠಲನ।
ಪ್ರಜ್ಞೆಯನ್ನು ಕೊಡುವಂತಹದು ॥

–ಪುರಂದರದಾಸರು

## ಬೋರ್ಡ್ ಹೊಸ ಸದಸ್ಯರ ಪ್ರಮಾಣ ವಚನ ಸ್ವೀಕಾರ

ತಿ. ತಿ. ದೇವಸ್ಥಾನಗಳ ಟ್ರಸ್ಟ್ ಬೋರ್ಡ್‌ಗೆ ಆಂಧ್ರಪ್ರದೇಶದ ಸರ್ಕಾರದಿಂದ ಹೊಸದಾಗಿ ನಾಮಕರಣ ಮಾಡಲ್ಪಟ್ಟ ನಾಲ್ವರು ಸದಸ್ಯರು ಈಚೆಗೆ ಶ್ರೀವೆಂಕಟೇಶ್ವರಸ್ವಾಮಿಯ ಸೇವೆಗಾಗಿ ಪ್ರಮಾಣ ವಚನವನ್ನು ಸ್ವೀಕರಿಸಿದರು. ಈ ಹೊಸ ಸದಸ್ಯರುಗಳೆಂದರೆ ಶ್ರೀ ಕಲಾರಿ ರಾಧ್ರಮ್ಮ, ಆಂಧ್ರಪ್ರದೇಶದ ಶಾಸನಸಭಾಸದಸ್ಯೆ ಶ್ರೀಮತಿ ಕ ಸೀತಾರಾಮಮ್ಮ, ದೆಹಲಿಯ ಶ್ರೀ ಅಲವಾಟಿ ವೆಂಕಟೇಶ್ವರರಾವ್, ಆಂಧ್ರಪ್ರದೇಶದ ಶಾಸನಸಭಾ ಸದಸ್ಯ ಶ್ರೀ ಆರ್. ಸತ್ಯನಾರಾಯಣ ಅವರುಗಳು. ತಿ. ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀ ನಾರಾಯಣ ಅವರು ಈ ಸದಸ್ಯರಿಗೆ ಪ್ರಮಾಣ ವಚನ ನೀಡಿದ ಕಾರ್ಯಕ್ರಮದಲ್ಲಿ ಆಂಧ್ರ ಪ್ರದೇಶದ ಶಾಸನ ಸಭಾಧ್ಯಕ್ಷ ಶ್ರೀ ನಾರಾಯಣ ರಾವ್ ಹಾಗೂ ಆಂಧ್ರಪ್ರದೇಶದ ದೇವಾದಾಯ ಇಲಾಖಾಮಂತ್ರಿ ಶ್ರೀ ಎಸ್. ಯತಿರಾಜರಾವ್ ಅವರುಗಳು ಹಾಜರಿದ್ದರು.

## ಅಜ್ಞಾತ ಭಕ್ತರಿಂದ ಮೂರು ಲಕ್ಷ ರೂ. ಕಾಣಿಕೆ

ಮೇ 20 ರಂದು ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಹುಂಡಿಯಲ್ಲಿ ಅಜ್ಞಾತ ಭಕ್ತರೊಬ್ಬರು 3 ಲಕ್ಷರೂಗಳ ಮೊತ್ತದ ನೂರು ರೂಪಾಯಿ ನೋಟುಗಳ ಕಂತೆಗಳನ್ನು ಸಮರ್ಪಿಸಿದ್ದಾರೆ ವರದಿಯಾಗಿದೆ. ಅಂದು ಒಟ್ಟು ಹುಂಡಿ ಆದಾಯ 7,15,910 ರೂಗಳೆಂದೂ ವರದಿಯಾಗಿದೆ.

ಅಂದು ಒಂದೇ ದಿನದಲ್ಲಿ ನಲವತ್ತು ಸಾವಿರ ಜನ ಭಕ್ತರು ಸ್ವಾಮಿಯನ್ನು ದರ್ಶಿಸಿದರು. ಹಿಂದೆಂದೂ ಕಾಣದಂತಹ 191 ಕಲ್ಯಾಣೋತ್ಸವಗಳು ನಡೆದು ಇದರಿಂದ ಒಟ್ಟು 70,500 ರೂಗಳ ಆದಾಯವಾಯಿತು.

## ಕಲ್ಲು ಹರಳುಗಳ ಆಭರಣಗಳ ಹರಾಜು

ತಿ. ತಿ. ದೇವಸ್ಥಾನಗಳಲ್ಲಿ ಹಲವಾರು ವರ್ಷಗಳಿಂದ ದಾಸ್ತಾನುಗೊಂಡಿದ್ದ ಕಲ್ಲು ಹರಳುಗಳ ಆಭರಣಗಳ ಹರಾಜು ಕಾರ್ಯಕ್ರಮ ನಾಲ್ಕು ದಿನಗಳ ಕಾಲ ನಡೆದು ಮೇ 22 ರಂದು ಕೊನೆಗೊಂಡಿತು. ಒಟ್ಟು 800 ಕಿ. ಗ್ರಾಂ. ಕಲ್ಲು ಹರಳುಗಳ ಆಭರಣಗಳ ಹರಾಜಿನಿಂದ ತಿ. ತಿ. ದೇ. ಗಳಿಗೆ 1.1 ಕೋಟಿ ರೂಗಳ ಆದಾಯವಾಯಿತೆಂದು ವರದಿಗಳು ತಿಳಿಸುತ್ತವೆ.



ಈಚೆಗೆ ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವಗಳು ಯಶಸ್ವಿಯಾಗಿ ನಡೆದವು. ಶ್ರೀಗೋವಿಂದರಾಜಸ್ವಾಮಿಯ ರಥೋತ್ಸವ ದೃಶ್ಯ.

## ಅಗ್ನಿಬಾಧಿತರಿಗೆ ತಿ.ತಿ ದೇ. ನೆರವು

ಆಂಧ್ರ ಪ್ರದೇಶದ ಚಿತ್ತೂರು ಬಳಿಯ ಮಾರೆಡುಪಲ್ಲಿಯಲ್ಲಿ ಐವತ್ತೆರಡು ಗುಡಿಸಲುಗಳೂ, ಪುತ್ತೂರು ತಾಲೂಕಿನ ಮಂಗನಂಪಲ್ಲಿಯ ಎಪ್ಪತ್ತೆರಡು ಮನೆಗಳೂ ಈಚೆಗೆ ಅಗ್ನಿ ಅನಾಹುತದಲ್ಲಿ ದಗ್ಧವಾಗಿದ್ದು, ಆಂಧ್ರಪ್ರದೇಶದ ವಿದ್ಯಾ ಶಾಖಾಮಂತ್ರಿ ಶ್ರೀ ಮುದ್ದು ಕೃಷ್ಣಮನಾಯುಡು ಅವರು ತಿ. ತಿ. ದೇ. ಬೋರ್ಡ್ ಅಧ್ಯಕ್ಷರಾದ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣರಾಜು ಅವರೊಂದಿಗೆ ಚರ್ಚೆ ನಡೆಸಿ ನೆರವಿಗಾಗಿ ಸಲಹೆ ನೀಡಿದರು. ಅದರಂತೆ ಅಗ್ನಿ ಅನಾಹುತದಲ್ಲಿ ಬಾಧಿತರಾದವರಿಗೆ ತಿ. ತಿ. ದೇ. ಗಳ ವತಿಯಿಂದ ವಸ್ತ್ರಗಳು, ಅಡಿಗೆಪಾತ್ರೆಗಳು, ಹಾಗೂ ಅಕ್ಕಿ (ಕುಟುಂಬಕ್ಕೆ ಹತ್ತು ಕೆ. ಜಿ. ಯಂತೆ) ಯನ್ನೂ ವಿತರಣೆ ಮಾಡಲಾಯಿತು.

## ← ವಜ್ರಕಿರೀಟದ ಕಾರ್ಯ

ಶ್ರೀ ವೆಂಕಟೇಶ್ವರಸ್ವಾಮಿಗೆಂದು ಹೊಸದಾಗಿ ತಯಾರಿಸಬೇಕೆಂದು ನಿರ್ಧರಿಸಲಾದ ಹೊಸ ಕಿರೀಟದ ಕೆಲಸ ರಭಸದಿಂದ ನಡೆದಿದೆ. ಸುಮಾರು ಆರು ಕೋಟಿ ರೂಗಳ ವೆಚ್ಚದ ಈ ಕಿರೀಟವನ್ನು ಬೆಂಗಳೂರಿನ ಸೂರಜ್‌ಮಲ್ ಅವರು ಉಚಿತವಾಗಿ ಮಾಡಿಕೊಡುವರು. 25 ಕೆ. ಜಿ. ಬಂಗಾರವನ್ನು ಬಳಸಿ ಮಾಡಲಾಗುವ ಈ ರತ್ನಖಚಿತ ಕಿರೀಟದ ಕಾರ್ಯಕ್ಕೆ ಈಚೆಗೆ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀ ನಾರಾಯಣ ಅವರು ಆರಂಭೋತ್ಸವ ನಡೆಸಿದರು.





ಭಾರತದ ಸಂತಶ್ರೇಷ್ಠರ ಬಗ್ಗೆ ಮಾತನಾಡುತ್ತ ಮುಂಬಯಿ ನಗರ ಪಾಲಿಕೆಯ ಮೇಯರ್

## ನಂದ್ಯಾಲದಲ್ಲಿ ತಿ. ತಿ. ದೇ. ಕಲ್ಯಾಣಮಂಟಪ

ಕರ್ನೂಲು ಜಿಲ್ಲೆಯ ನಂದ್ಯಾಲದಲ್ಲಿ ತಿ. ತಿ. ದೇ. ನಿರ್ಮಿಸಿದ ಕಲ್ಯಾಣಮಂಟಪದ ಆರಂಭೋತ್ಸವವನ್ನು ಜೂನ್ 2 ರಂದು ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ಪಿ. ಕೆ. ಡಿ. ವಿ. ಸತ್ಯನಾರಾಯಣ ರಾಜು ಅವರು ನಡೆಸಿಕೊಟ್ಟರು.

ಶ್ರೀಮತಿ ಏಟಕೂರು ಪಾರ್ವತಮ್ಮ ಅವರು ದಾನವಾಗಿ ನೀಡಿದ ಎರಡೂವರೆ ಎಕರೆ ಜಮೀನಿನಲ್ಲಿ ಕಟ್ಟಲಾದ ಕಲ್ಯಾಣ ಮಂಟಪದಲ್ಲಿ ವಿವಾಹೋಪನಯನಾದಿಗಳೇ ಅಲ್ಲದೆ ಧಾರ್ಮಿಕ ಉಪನ್ಯಾಸ, ಹರಿಕಥೆ, ಸಂಗೀತ ಸಭೆ ಮೊದಲಾದುವುಗಳೂ ನಡೆಯಲು ಅನುಕೂಲವಾಗಿದೆ. ಸ್ಥಳೀಯರ ಸಹಕಾರ ಹಾಗೂ ಐವತ್ತು ಶತಾಂಶ ಆರ್ಥಿಕ ನೆರವಿನಿಂದ ಈ ಕೇಂದ್ರವನ್ನು ಇನ್ನೂ ಹೆಚ್ಚು ಅಭಿವೃದ್ಧಿಗೊಳಿಸುವ ಉದ್ದೇಶವಿದೆಯೆಂದು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ತಿಳಿಸಿದರು.

## ಭಗವದ್ಗೀತೋಪನ್ಯಾಸ

ಶ್ರೀ ಕಾಳಹಸ್ತಿಯ ಶುಕಬ್ರಹ್ಮಾಶ್ರಮದ ಶ್ರೀ ವಿದ್ಯಾಪ್ರಕಾಶಾನಂದಗಿರಿ ಸ್ವಾಮಿಗಳವರು ಹನ್ನೊಂದು ದಿನಗಳಕಾಲ ತಿರುಪತಿಯಲ್ಲಿ ಭಗವದ್ಗೀತೋಪನ್ಯಾಸ ಮಾಡಿದರು. ದಿನವೂ ಸಂಜೆಯ ಹೊತ್ತಿನಲ್ಲಿ ಅಸಂಖ್ಯಾತ ಜನ ಸೇರಿ ಸ್ವಾಮಿಗಳ ಉಪದೇಶವಾಣಿಯನ್ನು ಕೇಳಿ ಆನಂದಿಸಿದರು.

ಕೃಷ್ಣ ಹೇಳಿದ ಕರ್ಮಯೋಗವನ್ನು—ನಿಷ್ಕಾಮ ಕರ್ಮವನ್ನು ಆಚರಿಸುವುದರ ಮೂಲಕ ಧಾರ್ಮಿಕವಾಗಿ ವೈಯಕ್ತಿಕ ನೆಲೆಯಲ್ಲಿ ಮುಕ್ತಿ ಸಾಧನೆಯ ಸಾಧ್ಯತೆಗಳಿರುವಂತೆಯೇ ರಾಷ್ಟ್ರೀಯ ನೆಲೆಯಲ್ಲಿ ಐಹಿಕಾಭ್ಯುದಯದತ್ತಲೂ ನಡೆಯುವ ಸಾಧ್ಯತೆಗಳಿವೆಯೆಂದೂ, ಜನ ಈ ದಿಕ್ಕಿನಲ್ಲಿ ಪ್ರಯತ್ನವನ್ನು ಹಾಕಿ ರಾಷ್ಟ್ರದ ಸರ್ವತೋಮುಖ ಮೇಲ್ಮೆಗೆ ಕಾರಣರಾಗಬೇಕೆಂದೂ ಸ್ವಾಮಿಗಳು ತಿಳಿಸಿದರು. ಭಾರತ ಜಗತ್ತಿಗೆ ನೀಡಿದ ಶ್ರೇಷ್ಠ ಕೊಡುಗೆಗಳಲ್ಲಿ ಶ್ರೀಕೃಷ್ಣಭಗವಾನನ ಗೀತೆಯು ಒಂದೆಂದೂ ತಿಳಿಸಿದ ಆಚಾರ್ಯರು, ಜಗತ್ತು ಈ ದೇವವಾಣಿಗೆ ಕಿವಿಗೊಟ್ಟಲ್ಲಿ ಉನ್ನತಿಯನ್ನು ಹೊಂದುವುದರಲ್ಲಿ ಸಂದೇಹವಿಲ್ಲ ಎಂದು ಘೋಷಿಸಿದರು.

ಗೀತೋಪನ್ಯಾಸದ ಕೊನೆಯ ದಿನ ತಿ. ತಿ. ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ಸುಬ್ಬರಾಯುಲು ಅವರು ಸ್ವಾಮಿಗಳನ್ನು ಸನ್ಮಾನಿಸಿ ಜನತೆ ಅವರ ಉಪದೇಶವನ್ನು ಮನನ ಮಾಡಿ ಭಗವದ್ವಾಣಿಯಂತೆ ನಡೆಯಲು ಪ್ರಯತ್ನಿಸಬೇಕೆಂದು ಕರೆನೀಡಿದರು.

## ರಾಮಾಯಣೋಪನ್ಯಾಸ

ತಿರುಪತಿಯಲ್ಲಿ ಹಿಂದೂ ಧರ್ಮ ರಕ್ಷಣ ಸಂಸ್ಥೆಯವರಿಂದ ಹನ್ನೊಂದು ದಿನಗಳ ಕಾಲ ರಾಮಾಯಣೋಪನ್ಯಾಸ ಕಾರ್ಯಕ್ರಮ ನಡೆದು ಯಶಸ್ವಿಯಾಯಿತು. ಪಂಡಿತ ಶ್ರೀ ಭಾಷ್ಯಂ ಅಪ್ಪಲಾಚಾರ್ಯರು ಹನ್ನೊಂದು ದಿನಗಳ ಕಾಲವೂ ದಿನವೂ ಸಂಜೆ ರಾಮಾಯಣದ ವೈಶಿಷ್ಟ್ಯವನ್ನು ಕುರಿತು ತೆಲುಗಿನಲ್ಲಿ ರಸೋಪೇತವಾದ ಉಪನ್ಯಾಸಗಳನ್ನು ನೀಡಿದರು. ಶ್ರೀ ರಾಮಚಂದ್ರನು ವಾಲ್ಮೀಕಿಯಲ್ಲಿ ಹೇಗೆ ಹದಿನಾರು ಗುಣಗಳಿಂದ ಪರಿಪೂರ್ಣನಾಗಿದ್ದಾನೆ ಎಂಬುದನ್ನು ಸೋದಾಹರಣವಾಗಿ ವಿವರಿಸಿದ ಆಚಾರ್ಯರು ಸುಂದರ ಕಾಂಡವು ನಿತ್ಯ ಪಾರಾಯಣ ಯೋಗ್ಯವೆಂದೂ ಸ್ತ್ರೀಬಾಲವೃದ್ಧ ಜಾತಿಮತಪಂಥ ಭೇದಗಳಿಲ್ಲದೆ ಪಠಿಸಲು ಅರ್ಹವೆಂದೂ ನುಡಿಯುತ್ತ ಶ್ರೀ ರಾಮಪಟ್ಟಾಭಿಷೇಕ ಪ್ರಶಂಸೆಯಿಂದ ಉಪನ್ಯಾಸಮಾಲೆಯನ್ನು ಮುಗಿಸಿದರು.

ಕಡೆಯ ದಿನ ಮಾತನಾಡಿದ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಆಚಾರ್ಯರ ಬಹುಮುಖ ಪ್ರತಿಭೆಯನ್ನು ಶ್ಲಾಘಿಸಿ ರಾಮಾಯಣೋಪನ್ಯಾಸ ಆನಂದದಾಯಿನಿಯಾಗಿದ್ದಿತೆಂದು ನುಡಿದರು. ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರು ರಾಮಾಯಣ ಪ್ರಶಸ್ತಿಯನ್ನು ಕುರಿತು ಮಾತನಾಡಿ ಸುಂದರಕಾಂಡವನ್ನು ಸುಲಭಬೆಲೆಗೆ ನೀಡುವಂತೆ ತಿ. ತಿ. ದೇ. ಪ್ರಕಟಿಸಿದರೆ ಲೋಕೋಪಕಾರವಾಗುತ್ತದೆ ಎಂದರು. ಶ್ರೀ ಚಿಟ್ಟಾ ದಾಮೋದರ ಶಾಸ್ತ್ರಿಯವರೂ ಮಾತನಾಡಿದರು. ಕಡೆಯಲ್ಲಿ ಶ್ರೀ ಭಾಷ್ಯಂ ಅಪ್ಪಲಾಚಾರ್ಯ ದಂಪತಿಗಳನ್ನು ಶ್ರೀ ವೆಂಕಟೇಶ್ವರಸ್ವಾಮಿಯ ಶೇಷವಸ್ತ್ರದಿಂದ ಗೌರವಿಸಲಾಯಿತು.

## ಪುರಾಣ ಪ್ರಬೋಧ ಪರೀಕ್ಷೆಗಳು

ಹಿಂದೂ ಧರ್ಮ ರಕ್ಷಣ ಸಂಸ್ಥೆಯವರು ಕಿರಿಯರಲ್ಲಿ ಸನಾತನ ಧರ್ಮವನ್ನು ಪ್ರಸಾರಮಾಡಲು ಯೋಜಿಸಿರುವ ಪುರಾಣ ಪ್ರಬೋಧ ಪರೀಕ್ಷೆಗಳ ಫಲಿತಾಂಶಗಳು ಹೊರಬಿದ್ದಿವೆ. ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಮಾತ್ರ ಸೀಮಿತವಾಗಿರುವ ಈ ಪರೀಕ್ಷೆಗಳ ಪಠ್ಯಕ್ರಮದಲ್ಲಿ ವಿವಿಧ ಮಹಾಕಾವ್ಯ ಕಥೆಗಳು, ವಿವಿಧ ದೇವತಾ ಸ್ತೋತ್ರಗಳೂ, ಹಿಂದೂ ಧರ್ಮದ ಒಂದು ಕಿರುಕೈಪಿಡಿಯೂ ಇದ್ದು, ಈ ಬಾರಿ ಆಂಧ್ರಪ್ರದೇಶದ 23 ಜಿಲ್ಲೆಗಳ 320 ಪ್ರೌಢಶಾಲೆಗಳಿಂದ 9577 ವಿದ್ಯಾರ್ಥಿಗಳು ಪರೀಕ್ಷೆ ಕೈಗೊಂಡಿದ್ದರು. ಇವರಲ್ಲಿ 6740 ಮಂದಿ ಸಫಲರಾಗಿದ್ದು, 604 ಮಂದಿ ಪ್ರಥಮ ದರ್ಜೆಯಲ್ಲೂ 1762 ದ್ವಿತೀಯ ದರ್ಜೆಯಲ್ಲೂ ಇತರರು ತೃತೀಯ ದರ್ಜೆಯಲ್ಲೂ ಪಾಸಾಗಿದ್ದಾರೆ.

ರಾಜ್ಯಮಟ್ಟದ ಮೊದಲ ಮೂರುಸ್ಥಾನಗಳು ಈ ರೀತಿಯಿವೆ. ಚಿ॥ ಪಿ ಆರ್. ರಾಜೇಶ್- ನೇ ತರಗತಿ, ಗಾರಂಪಲ್ಲಿ, ಚಿತ್ತೂರು (ಪ್ರಥಮ), ಚಿ॥ ಎಸ್. ರಾಮಕೃಷ್ಣ 10ನೆ ತರಗತಿ, ಗಾಂಧಿನಗರ, ಪ. ಗೋದಾವರಿ (ದ್ವಿತೀಯ), ಚಿ॥ ಪಿ. ವೇಣುಗೋಪಾಲ್, 10ನೆ ತರಗತಿ, ಮಚಲೀಪಟ್ನಂ, ಕೃಷ್ಣಾ ಜಿಲ್ಲೆ.

ರಾಜ್ಯಮಟ್ಟದ ಹಾಗೂ ಜಿಲ್ಲಾಮಟ್ಟದ ಮೊದಲ ಮೂರು ಸ್ಥಾನ ಪಡೆದವರಿಗೆ ಶೀಘ್ರದಲ್ಲೇ ರಜತ ಪದಕಗಳನ್ನು ಬಹೂಕರಿಸಲಾಗುವುದು.

ಮೇಲ್ಕಂಡವು ಆರನೆಯ ಬಾರಿಯ ಪರೀಕ್ಷೆಗಳ ಫಲಿತಾಂಶಗಳು. 7 ನೇ ಬಾರಿಯ ಪರೀಕ್ಷೆಗಳು 1986 ರ ಜನವರಿಯಲ್ಲಿ ನಡೆಯಲಿವೆ.



ಶ್ರೀ ಟಿ. ಎನ್. ಕೃಷ್ಣಸ್ವಾಮಿ ಅವರನ್ನು ಸ್ವಾಗತಿಸುತ್ತ ಶ್ರೀ ಕೆ. ಅಪ್ಪಣ್ಣಾಚಾರ್ಯ.



ಶ್ರೀಮತಿ ಮೃಣಾಲಿನೀ ದೇಸಾಯಿ

## ಮಹಾರಾಷ್ಟ್ರದಲ್ಲಿ ಹರಿದಾಸಸಾಹಿತ್ಯೋತ್ಸವ

ಮೇ ತಿಂಗಳ ಕೊನೆ ಹಾಗೂ ಜೂನ್ ತಿಂಗಳ ಮೊದಲಲ್ಲಿ ಮಹಾರಾಷ್ಟ್ರದ ಪೂನಾ ಹಾಗೂ ಬೊಂಬಾಯಿಗಳಲ್ಲಿ ಹರಿದಾಸ ಸಾಹಿತ್ಯೋತ್ಸವ, ವಸ್ತು ಪ್ರದರ್ಶನಗಳು ಒಟ್ಟು 9 ದಿನಗಳಕಾಲ ನಡೆದು ಅಸಂಖ್ಯ ಆಸ್ತಿಕ ಭಕ್ತರನ್ನು ಆಕರ್ಷಿಸಿದವು.

ಪೂನಾದ ಸದಾಶಿವಪೇಟೆಯ ಭಾವೆ ಪ್ರೌಢ ಶಾಲೆಯಲ್ಲಿ ಮೂರು ದಿನಗಳಕಾಲ ನಡೆದ ಹರಿದಾಸ ಸಾಹಿತ್ಯ ಸೌರಭ ಕಾರ್ಯಕ್ರಮದಲ್ಲಿ ಶ್ರೀ ಗಲಗಲಿ ಪಂಡರೀನಾಥಾಚಾರ್ಯರೂ ಶ್ರೀ ಮಾಳಗಿ ಜಯತೀರ್ಥಾಚಾರ್ಯರೂ ಉಪನ್ಯಾಸ ಗಳನ್ನು ನೀಡಿದರು. ವಿವಿಧ ಭಜನಮಂಡಳಿ ಗಳಿಂದ ಸಮೂಹ ಭಜನೆಗೋಷ್ಠಿಗಳೂ ಹರಿಕಥೆ ಗಳೂ ಏರ್ಪಾಡಾಗಿದ್ದವು. ಹರಿದಾಸ ಸಾಹಿತ್ಯ ವಸ್ತುಪ್ರದರ್ಶನವು ಇಲ್ಲಿ ಎಲ್ಲರೀತಿಯ ಜನವನ್ನೂ ಏಕತ್ರವಾಗಿ ಆಕರ್ಷಿಸಿತು.



ಶ್ರೀ ನರೇಂದ್ರ ಶರ್ಮ

ಬೊಂಬಾಯಿನ ಮೈಸೂರು ಅಸೋಸಿ-ಯೇಷನ್ ಸಹಕಾರದೊಡನೆ ಮೂರು ದಿನಗಳ ಕಾಲ ಮಾತುಂಗದ ಸಂಘಸ್ಥಳದಲ್ಲಿ ಮೇ 26, 27, 28 ರಂದು ಉತ್ಸವವನ್ನು ಆಚರಿಸಲಾಯಿತು. ದಾಸಸಾಹಿತ್ಯ ಪ್ರಾಜೆಕ್ಟ್‌ನ ಸಲಹಾಮಂಡಳಿಯ ಸದಸ್ಯ ಶ್ರೀ ಅದ್ಯರಾಮಾಚಾರ್ಯರು ಅಧ್ಯಕ್ಷತೆ ವಹಿಸಿದ ಸಭೆಯಲ್ಲಿ ಉತ್ಸವವನ್ನು ಶ್ರೀ ನಾಗ ಭೂಷಣರಾಯರು ಉದ್ಘಾಟಿಸಿದರು. ಖ್ಯಾತ ಹರಿದಾಸ ಸಂಶೋಧಕ ಶ್ರೀ ಹುಚ್ಚೂರಾವ್ ಬೆಂಗೇರಿ ಅವರನ್ನು ಸನ್ಮಾನಿಸಲಾಯಿತು. ಶ್ರೀಮತಿ ಸುಶೀಲಾ ಆಚಾರ್ಯರ ಭಕ್ತಿಮಾಲಾ ಸಂಗೀತ ಕಾರ್ಯಕ್ರಮವಿದ್ದಿತು. ಅಂದು ಸಂಜೆ ಸಲಹಾಮಂಡಳಿಯ ಸದಸ್ಯ ಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿಯವರು ಕನ್ನಡದಲ್ಲಿ ಉಪನ್ಯಾಸ ಮಾಡಿದರು. ಶ್ರೀಮತಿ ವಿಜಯಲಕ್ಷ್ಮಿನಾಥನ್ ಅವರು ದೇವರ ನಾಮಗಳನ್ನು ಹಾಡಿದರು. ಮಾತುಂಗದ ನಗರ ಸಭಾಸದಸ್ಯ ಶ್ರೀ ರುಸ್ತುಂ ತೀರಂದಾಜರು ಅತಿಥಿಗಳಾಗಿದ್ದರು. ಮೇ 27 ರಂದು ಶ್ರೀಮತಿ ಮೃಣಾಲಿನಿ ದೇಸಾಯಿ ಅವರ ಮರಾಠಿ ಉಪನ್ಯಾಸ, ಶ್ರೀ ಶರದ ಜಾಂಬೇಕರರಿಂದ ಮರಾಠಿ ಅಭಂಗಗಳು ಹಾಡಲ್ಪಟ್ಟವು. ಲೋಕಸಭಾಸದಸ್ಯ ಶ್ರೀ ಶರದ್ ದೀಗೆ ಅವರು ಅತಿಥಿಗಳಾಗಿ ಆಗಮಿಸಿದ್ದರು. ಮೇ 28 ರಂದು ಮಹಾರಾಷ್ಟ್ರದ ಗೃಹನಿರ್ಮಾಣ ಶಾಖಾಮಂತ್ರಿ ಶ್ರೀ ವಿ. ಸುಬ್ರಹ್ಮಣ್ಯಂ ಅವರ ಅಧ್ಯಕ್ಷತೆಯಲ್ಲಿ ಪಂಡಿತ ಶ್ರೀನರೇಂದ್ರಶರ್ಮರು ಹಿಂದಿಯಲ್ಲಿ ಉಪನ್ಯಾಸವನ್ನು ಮಾಡಿದರು. ಶ್ರೀಮತಿ ಹೇಮಾಂಗಿನಿ ಹಾಗೂ ಶ್ರೀ ಅಜಿತ ದೇಸಾಯಿಯವರು ಹಿಂದಿಯಲ್ಲಿ ಭಜನೆಗಳನ್ನು ಹಾಡಿದರು. ಬೊಂಬಾಯಿನ ಮೇಯರ್ ಶ್ರೀ ಚಗನ್ ಭುಜಬಲ ಹಾಗೂ ತಿ.ತಿ.ದೇ. ಆರ್ಥಿಕ ಸಲಹಾಧಿಕಾರಿ ಶ್ರೀ ಟಿ ಎನ್. ಕೃಷ್ಣಸ್ವಾಮಿ ಅವರು ಅತಿಥಿಗಳಾಗಿದ್ದರು.

ಮುಳುಂದದ ಸತ್ಯಧ್ಯಾನ ವಿದ್ಯಾಪೀಠದಲ್ಲಿ ಜೂನ್ 1ರಿಂದ 3ರ ವರಗೆ ಅಖಿಲಭಾರತ ಸಂತ ಸಾಹಿತ್ಯ ಸಮ್ಮೇಳನ ನಡೆಯಿತು. ಪುಷ್ಟಿಮಾರ್ಗದ ಬಗ್ಗೆ ಶ್ರೀಮತಿ ನಿಕುಂಜಲತಾ ನೆರಲೆ, ದಾಸ ಸಾಹಿತ್ಯದ ಬಗ್ಗೆ ಪಂಡಿತ ಶ್ರೀ ಕೃಷ್ಣಾಚಾರ್ಯ, ಜ್ಞಾನೇಶ್ವರಿಯ ಬಗ್ಗೆ ಶ್ರೀ ವಿ. ಎಸ್. ಪೇಜ್, ಅವರುಗಳು ಮೊದಲ ದಿನ ಮಾತನಾಡಿದರು. ಎರಡನೆಯದಿನ ಪಂಡಿತ ಶ್ರೀ ಅಶ್ವತ್ಥಾಮಾ



ಮಹಾರಾಷ್ಟ್ರದ ಮಂತ್ರಿ ಶ್ರೀ ವಿ.ಸುಬ್ರಹ್ಮಣ್ಯಂ

ಮುಂದಿನ ಸಂಚಿಕೆಯಲ್ಲಿ .... .... ....

## ಸಪ್ತಗಿರಿ ಸೆಪ್ಟೆಂಬರ್ — 1985

**ಗುಣರತ್ನಕೋಶ**
– ಕೆ. ಕೇಶವನ್

**ಹರಿಭಕ್ತಿ ಸಾರ**
– ಎನ್. ಪುಷ್ಪ

**ಅರಣ್ಯಕೋಪನಿಷತ್ತುಗಳು**
– ಡಾ॥ ಎಸ್. ಅನಂತರಂಗಾಚಾರ್

**ಕೃಷ್ಣನಾಟ್ಟಂ**
– ಸಿ. ಎಚ್. ಲಕ್ಷ್ಮಿ

**ಮಧ್ಯಕಾಲೀನ ಕರ್ನಾಟಕದ ಸಂಘಟನೆ-ಏಕತೆ**
– ಡಾ॥ ಕೆ.ಜಿ. ವಸಂತಮಾಧವ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯ ದಿನಗಳು

## ಸೆಪ್ಟೆಂಬರ್ 1985

| | | |
|---|---|---|
| 7. | ಶನಿವಾರ | ಗೋಕುಲಾಷ್ಟಮಿ, ಶ್ರೀಕೃಷ್ಣ ಜಯಂತಿ |
| 8. | ಭಾನುವಾರ | ತಿರುಮಲೆಯಲ್ಲಿ ಉಟ್ಲ ಉತ್ಸವ |
| 9. | ಸೋಮವಾರ | ಶ್ರೀ ಕೋದಂಡರಾಮಸ್ವಾಮಿ ಉಟ್ಲ ಉತ್ಸವ |
| 16. | ಸೋಮವಾರ | ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಅಂಕುರಾರ್ಪಣೆ ಸಾಮವೇದ ಉಪಾಕರ್ಮ |
| 17. | ಮಂಗಳವಾರ | ವರಾಹಜಯಂತಿ, ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಧ್ವಜಾರೋಹಣ. |
| 18. | ಬುಧವಾರ | ವಿನಾಯಕ ಚತುರ್ಥಿ |
| 19. | ಗುರುವಾರ | ಋಷಿ ಪಂಚಮಿ |
| 21. | ಶನಿವಾರ | ಶ್ರೀ ವೆಂಕಟೇಶ್ವರಸ್ವಾಮಿ ಗರುಡೋತ್ಸವ |
| 24. | ಮಂಗಳವಾರ | ಶ್ರೀ ವೆಂಕಟೇಶ್ವರಸ್ವಾಮಿ ರಥೋತ್ಸವ |
| 25. | ಬುಧವಾರ | ವಾಮನಜಯಂತಿ |
| 27. | ಶುಕ್ರವಾರ | ಅನಂತಪದ್ಮನಾಭ ವ್ರತ |
| 29. | ಭಾನುವಾರ | ಮಹಾಲಯ ಆರಂಭ. |



ಶ್ರೀ ಆದ್ಯರಾಮಾಚಾರ್ಯ

ಚಾರ್ಯರು ಪೂರ್ಣತತ್ತ್ವದ ಬಗ್ಗೆ, ಶಿಕ್ಷಾಪತ್ರಿಯ ಬಗ್ಗೆ ಪ್ರೊ॥ ರಮೇಶದೇವ್, ಕೃಷ್ಣಸ್ತುತಿಯ ಬಗ್ಗೆ ಪಂಡಿತ ಶ್ರೀ ಮಣಿಹಾರ ದಾಸರು ಮಾತನಾಡಿದರು. ಮೂರನೆಯದಿನ ಲೋಕನೀತಿಯ ಬಗ್ಗೆ ಪಂಡಿತ ಶ್ರೀ ಜಯತೀರ್ಥಾಚಾರ್ಯರೂ, ಆತ್ಮನಿವೇದನೆಯ ಬಗ್ಗೆ ಪಂಡಿತ ಶ್ರೀನಿವಾಸಾಚಾರ್ಯರೂ, ಶ್ರೀವಿದ್ಯಾಸಿಂಹಾಚಾರ್ಯರೂ ಡಾ॥ ವೆಂಕಟಾಚಾರಿಯವರೂ ಶ್ರೀ ಆದ್ಯರಾಮಾಚಾರ್ಯರೂ ಮಾತನಾಡಿದರು.

ವಿವಿಧ ಭಜನೆಮಂಡಳಿಗಳವರು ಸಾಮೂಹಿಕ ಭಜನಗೋಷ್ಠಿಗಳನ್ನೂ ಸಂಗೀತ ಕಾರ್ಯಕ್ರಮಗಳನ್ನೂ ನಡೆಸಿಕೊಟ್ಟರು. ಈ ಕಾರ್ಯಕ್ರಮಕ್ಕೆ ಶ್ರೀ ಕೆ. ಅಪ್ಪಣ್ಣಾಚಾರ್ಯ ಹಾಗೂ ಶ್ರೀ ಆದ್ಯರಾಮಾಚಾರ್ಯ ಅವರುಗಳು ಸಂಯೋಜಕರಾಗಿದ್ದರು.



ಶ್ರೀ ಕೆ. ಅಪ್ಪಣ್ಣಾಚಾರ್ಯ

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

